ನಿಮಗೆ ಹಾಗೂ ನಿಮ್ಮ ಆಪ್ತರಿಗೆ
ಉಡುಗೊರೆ ಪಡೆಯಲು,
ನೀಡಲು ನಿಯೋಜಿಸಿರುವ
ಅಪೂರ್ವ

## ಪ್ರತಿಮಾ ಯೋಜನೆ

●

ದೀಪಾವಳಿಯಿಂದ ದೀಪಾವಳಿಗೆ
ತಿಂಗಳಿಗೊಂದರಂತೆ
**೧೨ ನಾಟಕಗಳನ್ನು**
ಪ್ರತಿಮಾ
ನಿಮಗೆ ನೀಡುವುದು.

●

ರೂ. ೧೦/-ನ್ನು ಒಮ್ಮೆಗೇ ತೆತ್ತು
೧೫/- ರೂ.ಗಳಿಗೆ ಮೀರಿದ
ಬೆಲೆಬಾಳುವ ಕೃತಿಗಳನ್ನು
ಪಡೆಯುವ ಸದವಕಾಶ

●

ವಿವರಗಳಿಗೆ
ದಯಮಾಡಿ ಕೊನೆಯ
ಹೊದಿಕೆಯ ಒಳಪುಟ ನೋಡಿರಿ.

ಪ್ರ. ಸಂ. ೨೬

ಪ್ರತಿಮಾ ನಾಟಕ ೧

# ಸಾವೊಲಿದ ಸಾವಿತ್ರಿ

(ಛಂದೋರೂಪಕ)

ಟಿ. ಜಿ. ಮುಡೂರು

ಪ್ರತಿಮಾ ಪ್ರಕಾಶನ ಪಂಜ
ದ. ಕ.

*Publisher*
**PRATHIMA PRAKASHANA**
**PANJA, S. K.**

*Savolida Savithri—*
*a blank verse drama by T. G. Mudoor Vidwan*
*Published by Prathima Prakashana Panja S. K.*

ಛಂದೋರೂಪಕ--

**ಸಾವೊಲಿದ ಸಾವಿತ್ರಿ**

ಮೊದಲ ಮುದ್ರಣ:
ಅಕ್ಟೋಬರ 1951
1000 ಪ್ರತಿಗಳು



ಪ್ರಕಾಶನ:
ಪ್ರತಿಮಾ ಪ್ರಕಾಶನ ಪಂಜ, ದ. ಕ.

ಮುದ್ರಣ:
ಶಾಂತಿನಾಥ ಪವರ್ ಪ್ರೆಸ್,
ಪುತ್ತೂರು, ದ. ಕ.

ರಚನೆ:
ಟಿ. ಜಿ. ಮುಡೂರು, ಪಂಜ. ದ.ಕ.



ಬೆಲೆ: ರೂ. ೧-೨೫

## ರೂಪಕದ ಕುರಿತು—

'ಸಾವೊಲಿದ ಸಾವಿತ್ರಿ' ರೂಪಕವಿನನ್ನು ನಾನುಬರೆದುದು 1956ರಲ್ಲಿ. ಪ್ರೌಢ ಶಾಲಾ ವಿದ್ಯಾರ್ಥಿಗಳ ಅಭಿನಯಕ್ಕಾಗಿ ಬರೆದ ರೂಪಕವಿದು ಈಗಾಗಲೇ ಹಲವೆಡೆ ರಂಗಪ್ರಯೋಗವಾಗಿದೆ. ಇಂದು ಯಾವ ಬದಲಾವಣೆಯೂ ಇಲ್ಲದೆ ಇದು ಮುದ್ರಣಕ್ಕೆ ಹೋಗುತ್ತಿದೆ. ನಾಟಕಗಳಲ್ಲಿ ಹೊಸ ವಸ್ತು, ತಂತ್ರ ಪ್ರಯೋಗಗಳ ಈ ಕಾಲದಲ್ಲಿ ಇಂತಹ ರೂಪಕಗಳಿಗೆ ಬೆಲೆ ಬರಬಹುದೇ ಎಂಬ ಶಂಕೆಯಿದ್ದರೂ ಇದನ್ನು ಬಚ್ಚಿಡದೆ ಬಯಲಿಗಿಟ್ಟಿದ್ದೇನೆ.

ಇದರೊಂದಿಗೆ ರೂಪಕವಿದನ್ನು ಅಲ್ಲಲ್ಲಿ ಆಡಿ ತೋರಿಸಿದ ಎಳೆಯ ಕಲಾವಿದರ ಹಾಗೂ ನನ್ನ ಇತರ ನಾಟಕಗಳನ್ನು ಪ್ರದರ್ಶಿಸಿ ಪ್ರೋತ್ಸಾಹಿಸುವ ಕಲಾ ಬಳಗಗಳ ನೆರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಆಡುವವರೇ ನಾಟಕದ ಲೇಖಕನ ಭಂಡವಾಳ. ಅವರ ನೆರವೇ ನೆರವು. ಆದರೆ ತಾವು ಆಡುವ ನಾಟಕದ ಲೇಖಕನನ್ನು ಮರೆಯುವ ಹವ್ಯಾಸ ಹವ್ಯಾಸೀ ಕಲಾವಿದರಲ್ಲಿರಬಾರದು. ಪ್ರದರ್ಶನಕ್ಕೆ ಲೇಖಕನ ಅನುಮತಿ ಪಡೆಯುವ ಸೌಜನ್ಯವನ್ನು ಮರೆತು ವರ್ತಿಸಬಾರದಾಗಿ ಕಲಾ ಪ್ರದರ್ಶಕರಲ್ಲಿ ವಿನಂತಿ.

— **ಮುಡೂರು**

## ಪ್ರಕಟಣೆಯ ಕುರಿತು—

ಕನ್ನಡ ಪ್ರಕಾಶನ ರಂಗದಲ್ಲಿ ಹೊಸಬಗೆಯ ಪ್ರತಿಮಾ ಯೋಜನೆಯೊಂದನ್ನು ನಿಮ್ಮ ಮುಂದಿಡುತಿದ್ದೇವೆ. ದೀಪಾವಳಿಯಂದು ಹಚ್ಚುವ ಒಂದು ಹಣತೆ ನೂರಾಗಿ, ಸಾವಿರವಾಗಿ, ಲಕ್ಷೋಪಲಕ್ಷವಾಗಿ ಮನೆಮನಗಳನ್ನು ಬೆಳಗಿಸುವಂತೆ ಕಲಾ ಸುಹೃದರು ಈ ಯೋಜನೆಯನ್ನು ಯಶಸ್ವೀಗೊಳಿಸಬಲ್ಲರೆಂಬ ನಂಬುಗೆ ನಮಗಿದೆ.

"ಉರಿದು ನೀನೊಂದು ಕಿಡಿಯಾಗು, ಬೆರೆತು ಬಳಿಯ ಇದ್ದಲನ್ನೂ ಬೆಳಗಿಸು" ಈ ಮಾರ್ಗದಲ್ಲಿ ಮುನ್ನಡೆಸಿ ಸಹಕರಿಸಬೇಕಾಗಿ ವಿನಂತಿ.

**—ಪ್ರಕಾಶಕರು**

ಪಾತ್ರಗಳು—

ಸಾವಿತ್ರಿ

ಸತ್ಯವಾನ

ಅಶ್ವಪತಿ

ನಾರದ

ಯಮಧರ್ಮ

# ದೃಶ್ಯ ೧

(ಅಶ್ವಪತಿಯ ಅರಮನೆಯ ಒಂದು ಭಾಗ, ತೆರೆಯೇಳುವ ಹೊತ್ತು ಅರಸನು ಶತಪಥ ಹೆಜ್ಜೆ ಹಾಕುತ್ತಿರುವನು)

ಅಶ್ವಪತಿ- ಎಂತಿದೀ ಬಿದಿಯೆಣಿಕೆ! ಅಂತಲ್ಲದಿರ್ದೊಡಂ
ಮನವೇಕೆ ಸಂತಸವನುಳಿಯುತಿದೆ? ಸುತೆಯ ಬರ
ಮಂ ಅರಿದು, ಸಿದ್ಧಿಸಿಹನಲ್ಗಜ್ಜಮುಂ ನೆನೆದು
ಇಂತೇತಕವಳ ಭಾಗ್ಯಕೆ ಅಶ್ವಪತಿಯೆನ್ನ
ಮನವಿಂದು ಸಂಚಲಿಸುತಿದೆ?
(ಪಕ್ಕಕ್ಕೆ ನೋಡಿ)
ಅದೋ! ಬಂದಪಳ್
ಬಾ ಮಗಳೆ! ಸಾವಿತ್ರಿ ...

(ಸಾವಿತ್ರಿಯು ಪ್ರವೇಶಿಸಿ ತಂದೆಯ ಪಾದಗಳಿಗೆರಗಿ)

ಸಾವಿತ್ರಿ- ವಂದಿಸುವೆನಿದೊ ತಂದೆ!

ಅಶ್ವಪತಿ- (ಹಿಡಿದೆತ್ತಿ)
ಸೌಭಾಗ್ಯವತಿಯಾಗಿ ಬಾಳಮ್ಮ ನೀ ಸತತ
ಪುಣ್ಯ ಯಾತ್ರೆಯ ಮುಗಿಸಿ ಬಂದವಳು ನೀನಿರ್ಪೆ
ಬಳಲಿಹೆಯ ಬಹುವಿಧದಿ

ಸಾವಿತ್ರಿ- ಇಲ್ಲ ಪಿತ, ಎನಗಿಲ್ಲ
ಆಯಾಸ. ಹಿರಿಯರಾಶೀರ್ವಾದ ಬಲದಿಂದ,
ಪೂಜ್ಯವರ ಮಂತ್ರಿಗಳ ಮಾರ್ಗದರ್ಶನದಿಂದ
ಯಾತ್ರೆಯಿದು ದಣಿವಿರದೆ ಪರಿಣಮಿಸಿತೆನಗಿಂದು.

ಅಶ್ವಪತಿ- ದಿಟವ ನುಡಿದಿಹೆ ಮಗಳೆ! ನೀನಲ್ಲ ಬರಿ ಹೆಣ್ಣು.
ಹೆಣ್ಣೆದೆಯು ನಿನದಲ್ಲ. ಗಂಡೆದೆಗು ನಿಲುಕದಿಹ
ಸತ್ವಶಾಲಿನಿ ನೀನು. ನಿತ್ಯ ಗಂಭೀರಳಿಹೆ.
ಚತುರೆ ನೀನಿಹೆಯೆನ್ನ ಕುಲದೀಪಕಳು. ಮಗಳೆ....

ಸಾವಿತ್ರಿ- ಪೊಗಳಬಾರದು ತಂದೆ! ಮಗಳನೀತೆರನೀನು

ಅಶ್ವಪತಿ- ಪೊಗಳ್ಕೆಯೆನ್ನದಿರಮ್ಮ! ಸರ್ವ ಶಕ್ತಿಯೊಳ್ನಿನ್ನ
ಸೃಜಿಸಿರುವ ವರಬ್ರಹ್ಮ ದೇವ ಕಲ್ಪನೆಯಲ್ಲಿ
ಪೆಣ್ಣಾದೆ ನೀನ್ ತಪ್ಪಿ. ಗಂಡಾಗಿ ಪುಟ್ಟುತಲಿ
ರಾಯಗದ್ದುಗೆಯೇರಬೇಕಿತ್ತು ನೀನಮ್ಮ.

ಸಾವಿತ್ರಿ- ವಿಧಿನಿಯಮವಂತಿರಲು ತಡೆದಪರು ಯಾರು ಪಿತ?

ಅಶ್ವಪತಿ- ಪ್ರಾಜ್ಞಳಿಹೆ ನೀ ಮಗಳೆ! ಅಂತೆ ಯಾತ್ರೆಯ ನೆವದಿ
ಸತ್ಫಲವ ಪಡೆದಿರ್ಪೆಯೆಂಬುದನು ಅರಿತಿಹೆನು.
ಎನ್ನ ಭಾರವನಿಂತು ಹಗುರಗೊಳಿಸಿಹೆ ಮಗಳೆ.

ಸಾವಿತ್ರಿ- ಇದುವರೆಗೆ ನೀನೆನ್ನ ನಿಡು ಚಿಂತನೆಯ ಹೊತ್ತು
ಬಳಲಿ ಬೆಂಡಾದುದನು ಮರೆಯಲಾರೆನು ತಂದೆ

ಅಶ್ವಪತಿ- ಪೆತ್ತ ತಾಯ್ತಂದೆಯವರ ಕರ್ತವ್ಯವಿದು ಮಗಳೆ!
ಪಡೆದ ಹೆಮ್ಮಕ್ಕಳನು ಪ್ರಾಪ್ತಕಾಲದಿ ಲಗ್ನ
ಮಾಡಿಕೊಡುವೀ ಹೊಣೆಯು ಪಿತನಿಗಿದೆ.
ಆದರಾನುಳಿದಿರ್ದೆ ಸುತಳೆ ನಿನಗೆಣೆಯಹನ
ಜತೆಗೊಳಿಪ ಕಜ್ಜದಲಿ. ಪಿತನ ಭಾರವನಿಂತು
ಸುತೆಯೆನೀನಿಳಿಸಿರ್ಪೆ. ನಿನ್ನ ಮನಕೊಪ್ಪಿರ್ಪ
ಬಾಳ ಸಂಗಾತಿಯನ್ನಾರಿಸಿಹೆ. ಒಳಿತಾಯ್ತು
(ಅನುಮಾನಿಸಿ ತುಸು ತಡೆದು)
ಆದೊಡಂ....

ಸಾವಿತ್ರಿ- ಏನ್ತಂದೆ! ಏಕೆ ಶಂಕಿಪೆಯಿಂತು?

ಅಶ್ವಪತಿ- ಕಡಲು ಕಡಲನೆ ಕೂಡುವುದು. ಬಾನು ಬಾನನೇ
ಸಂಧಿಪುದು ಅರಗುವರಿ. ನೀನಿಂದು ಕಾಡಾಡಿ
ಯೋರ್ವ ಮುನಿ ಪುತ್ರನನು ವರಿಸಿ ಬಾಳುವುದಿಂತು
ಎನ್ನ ಮನಕೊಪ್ಪದಿದು. ಎದೆ ಕೊರೆಪುದು ಮಗಳೆ!

ಸಾವಿತ್ರಿ- ಕಾಡಾಡಿಯಾದೊಡಂ ಸೌಭಾಗ್ಯನಿಹನಪ್ಪ!

ಅಶ್ವಪತಿ- ಅರಸೊತ್ತಿಗೆಯನೇನು ಅರಸಬೇಡವೆ ಕಂದ?

ಸಾವಿತ್ರಿ- ಅರೆಗಳಿಗೆಯಾದೊಡಂ ಸಿರಿಯನಾನೆಚ್ಚಿಲ್ಲ.

ಅಶ್ವಪತಿ. ಕುಲಗೋತ್ರವರಿತಾದೊಡಂ ಮನವನಿಟ್ಟಿಹೆಯ?

ಸಾವಿತ್ರಿ- ಗಗನದಲಿ ಸಂಚರಿಪರವಿಗಿಹುದೆ ಕುಲಗೋತ್ರ?

ಅಶ್ವಪತಿ- ರೂಪಗುಣ ಸಂಪನ್ನನೇ ನಿನಗೆ ಎಣೆಯಿಹನೆ?

ಸಾವಿತ್ರಿ- ಬಾಹ್ಯರೂಪದ ಪರಿವೆಗಾನು ಮರುಳಹಳಲ್ಲ.
ತಂದೆ, ಒಮ್ಮತದಿ ಪೇಳುತಿಹೆನೆನ್ನ ಮನ
ನೆಟ್ಟಿಹುದು ಆತನಲಿ. ಆವ ಜನ್ಮದ ಪ್ರೇಮ
ಬಂಧನವೊ ನಾನರಿಯೆ, ಕಟ್ಟಿಹುದು ನಮ್ಮಿರ್ವ
ರನ್ನೊಂದೆ ಕಟ್ಟಿನಲಿ. ಇಂದಿಗಾತನೆಯೆನ್ನ
ಇಷ್ಟ ದೇವತೆಯಿಹನು. ಆ ಎನ್ನ ಪ್ರಿಯತಮನು.

ಅಶ್ವಪತಿ- (ನಿಶ್ಚಿಂತೆಯಿಂದ)
ಪಡಿನುಡಿಯೆ ನಾ ಮಗಳೆ! ನಿನ್ನ ಮನದಿಚ್ಛೆಯೇ
ಎನ್ನ ಮನದಿಚ್ಛೆಯದು.
(ದೂರದಿಂದ ಹರಿನಾಮ ಸಂಕೀರ್ತನೆ ಕೇಳಿ ಬರುವುದು.
ಅದನ್ನು ಆಲಿಸಿ ತಿಳಿದು)
ಸಾವಿತ್ರಿ! ದೇವಋಷಿ
ನಾರದರ ಬರವೆಂದು ತೋರುತಿದೆ. ಬಾ, ಪೋಗಿ
ಸಾದರದೊಳಿದಿರ್ಗೊಳ್ವ

ಸಾವಿತ್ರಿ- (ತಂದೆಯೊಡನೆ ಮುಂದಾಗಿ)
ನಡೆತಂದೆ. ಮುನಿವರ್ಯ
ರಲ್ಲಿ ಪುಗುತಂದರದೊ
(ನಾರದರು ಪ್ರವೇಶಿಸುವರು. ಹರಿಕೀರ್ತನೆಯನ್ನು ನಿಲ್ಲಿಸಿ

ಗಂಭೀರವಾಗಿ 'ಓಂ ಹರಿ ನಾರಾಯಣ' ಎಂದು ಹರಿ
ನಾಮ ಸ್ಮರಣೆ ಮಾಡುವರು)

**ಅಶ್ವಪತಿ-** ಬಿಜಯಗೈವುದು ದೇವ!
ಪೊಡಮಡುವೆನಿದೊ, ತಮ್ಮ ಬರವಿಂದಲೆನ್ನನೆಲೆ
ಮನೆಯೆ ಪಾವನಮಾಯ್ತು
(ಕರೆದು ತಂದು)
ಹೀಗೆ ಈ ಪೀಠದಲಿ
ಆಸೀನರಾಗುವುದು ಮುನಿವರ್ಯ!

**ನಾರದ-** (ಕುಳಿತು ಕೈಯೆತ್ತಿ)
ಶುಭಮಸ್ತು.
ಸುಗುಣರೊಡೆಯನೆ ನಿನಗೆ ದೀರ್ಘಾಯು
ಕ್ಷೇಮಕರವಾಗಿರಲಿ ರಾಜ್ಯಪಾಲನೆ, ನಿನ್ನ
ಪ್ರಜಾರಾಜ್ಯ ಪರಿವಾರಕೇಗಳುಂ ಮಂಗಲಂ

**ಸಾವಿತ್ರಿ-** ವಂದಿಸುವೆ ಮುನಿವರನೆ! ಸಾವಿತ್ರಿಯಿಹೆ ನಾನು.

**ಅಶ್ವಪತಿ-** ಇವಳೆನ್ನ ಅರಗುವಿರಿ, ಸಂಸಾರ ಪೂರ್ಣತೆಯ
ನನುಗೊಳಿಸೆ ವೈವಾಹಪೂರ್ವನಿಶ್ಚಿತ ವಧುವು
ನಮಿಸುವಳು ಹರಸುವುದು.

**ನಾರದ-** ಮುತ್ತೈದೆಯಾಗಿ ನೀನ್
ಬಾಳಮ್ಮ ಬಹುಕಾಲ

**ಸಾವಿತ್ರಿ-** ಕೃತಾರ್ಥಳಹೆ, ನಾ ಗುರುವೆ!
ಪತಿಯನೆಡೆಬಿಡದೆ ಅನುಚರಿಪ ಬಲವಿರಲೆನಗೆ,
ಅದುವೆನ್ನ ಸಂಪದವು.

**ನಾರದ-** ಸಿದ್ಧಿರ್ಭವತು, ಪುತ್ರಿ
(ಅಶ್ವಪತಿಯೊಡನೆ)
ವರನಾರು ಅಶ್ವಪತಿ?

**ಅಶ್ವಪತಿ-** ತಮಗಗೋಚರನಲ್ಲ

ಸತ್ಯವಾನನು ಇವಳ ಮನಕೆ ಮೆಚ್ಚಿಗೆಯಿಹನು
ಮಾತೃ ಪಿತೃಗಳ ಕೂಡೆ ಇಂದಿಹನು ಕಾನನದಿ
ಕಾಡಾಡಿಯೆಂದು ನಾಪೇಳಲೊಡ ನಾಚುವೆನು.
ಸಾವಿತ್ರಿಗೆಣೆಯುಹನು ಮಿಕ್ಕೊರ್ವ ವರನಿಲ್ಲ.

**ನಾರದ-** ನಾಚದಿರು ಅಶ್ವಪತಿ! ದ್ಯುಮತ್ಸೇನನರಗುವರ
ಸತ್ಯವಾನನು ಇಂದು ಕಾಡಾಡಿಯಾದೊಡಂ
ರಾಯಕುಲ ಸಂಭವನು, ಸತ್ಕುಲನು, ಸದ್ಗುಣನು.
ತೇಜಸ್ವಿ, ರೂಪಗುಣಸಂಪನ್ನತೆಯ ಮೂರ್ತಿ.
ಕ್ಷಾತ್ರಧರ್ಮವನರಿತ ಬಿಸಿರಕುತದೆಳೆತರುಣ
ಆಶ್ರಮದ ಜೀವನದಿ ಪರಿಪಾಠಿಯಾಗಿಹಂ
ಸುಭಗಸುಂದರನವನು ಪರಮ ಪುತ್ಥಳಿನಿನ್ನ
ಅರಗುವರಿಯಾತನಲಿ ಮನಸೋಲ್ತುದೇಂ ಪಿರಿದೆ!

**ಅಶ್ವಪತಿ-** ತಪ್ಪಿರ್ದನೆಂತಿರಲು ತಮ್ಮ ನುಡಿಯಿಂದರಿತೆ
ಅಂತಾಗಲೆನ್ನ ಕುವರಿಯ ಭಾಗ್ಯ. ಆದೊಡಂ....
ಸುಖ ವಿಲಾಸದಿ ಬಳೆದ ಮತ್ಕುವರಿಯಂ ದಟ್ಟ
ಕಾರಡವಿಗಟ್ಟುವರೆ ಮನವೆ ಪಿಂಜರಿಯುತಿದೆ
ಪೆತ್ತೊಡಲ ಹಂಬಲವು ಪಿರಿದಲ್ತೆ ಮುನಿವರ್ಯ!
(ಕಂಠ ಗದ್ಗದಿತನಾಗಿ)
ಎನ್ನ ಕುಲದೀಪವಿವಳಂ ಎಂತು ಪೆರಗೀವೆ
ಮುಂದೆನ್ನ ಬಾಳಿಗೆಲ್ಲಿದೆ ಬೆಳಕು? ಸತ್ಕುವರ
ನೋರ್ವನನು ಪಡೆಯದಿಹ ನಿರ್ಭಾಗ್ಯನಿಹೆನಾನು.

**ನಾರದ-** ಪಡೆದುಬಾರದ ಬದುಕಿಗಾಗಿ ಮರುಗದಿರರಸ!
ಪೆಣ್ಣವಳು ಪೆರರೊಡೆವೆ ಆದೊಡಂ ನಿನ್ನ ಕುಲ
ದೀಪಕಳು; ಕೀರ್ತಿಯುಳಿಸುವಳಿವಳು ಚಿರಕಾಲ

**ಅಶ್ವಪತಿ-** ಅದುವೆನ್ನ ಪಿರಿಬಯಕೆ. ಕುವರಿಯೆನ್ನವಳ ಸುಖ
ಕಾಣು ಬಗೆಯೆನು ಎಡರ. ಮುನಿವರನೆ! ತಮ್ಮ ನುಡಿ

ಯಿಂದೆನ್ನ ಮನದುಗುಡ ದೂರಾಯ್ತು. ಸಾವಿತ್ರಿ
ಸತ್ಯವಾನರು ಮುಂದಕಾದಪರು ಸತಿಪತಿಗ
ಳಿಂತು ಬಿದಿಯೆಣಿಕೆಯಿರಲಂತಾಗಲಿದು ಒಳಿತೆ.

ನಾರದ. ಸಾವಿತ್ರಿ ಸತ್ಯವಾನರು ಮುಂದಕಾದಪರು
ಸತಿಪತಿಗಳಾದೊಡಂ....
(ಅನುಮಾನಿಸಿ)
ಅಂತಾದೊಡಂ....ಅರಸ!

ಅಶ್ವಪತಿ. (ಕುತೂಹಲದಿಂದ)
ಏಂ ದಿವ್ಯಜ್ಞಾನಿಗಳೆ! ಮನಕಿಹುದೆ ಸಂದೇಹ?

ನಾರದ- ಸಂದೇಹ ಪೆರತಲ್ಲ. ಸಂಕೋಚನೆಯುನೊರೆದು
ಸಂತಾಪ ಪಡಿಸುವರೆ ಹಿಂದುಳಿಯುತಿದೆ ಮನವು

ಅಶ್ವಪತಿ- (ಕಳವಳದಿಂದ)
ಅರಿಯದಿಹೆ ನಾನಿದಂ. ಕರುಣಿಪುದು ಮುನಿವರ್ಯ

ನಾರದ- ನಿನ್ನ ಸುತೆ ಸಾವಿತ್ರಿ ನಾಳೆ ಬಾಡುತ ತನ್ನ
ಪಾಡಳಿವ ಸುಮವನ್ನು ಮುಡಿತುಂಬಲೆಳಸಿಹಳು
ಮುಗ್ಧೆಯಿಹಳವಳೆನ್ನ ಮನವು ಕನಿಕರಿಸುತಿದೆ

ಅಶ್ವಪತಿ. ತಮ್ಮ ನುಡಿಯೊಗಟೆನಗೆ ಮನವರಿಕೆಯಾಗಿಲ್ಲ
ಆವ ಪ್ರಮಾದವಾಗಿಹುದೊಡೆಯ ಎಮ್ಮಿಂದ?

ನಾರದ- ಪ್ರಮಾದಮಿದು ಕಿರಿದಲ್ಲ, ಸಾವಿತ್ರಿಯಿದಿರಿನಲಿ
ಪೇಳಬಾರದುಯಿದನು. ಕೇಳಬಾರದು ಅವಳು

ಸಾವಿತ್ರಿ- ಕರುಣಿಸೆನ್ನಯ ಮೇಲೆ ಮಮತೆಯಿಡು ಮುನಿದೇವ
ಪತಿಯಾದವನ ಕುರಿತು ಸತಿಕೇಳ್ವುದಿದು ಧರ್ಮ

ನಾರದ- ನಿನ್ನನೀ ನುಡಿಯೊರೆದು ಮಾನಕಘಾತವಗೊಳಿಸ
ಲಾರೆನಾಂದಿಟವೆನ್ನಯೆದೆ ಬೆದರುತಿದೆ ಮಗಳೆ

ಸಾವಿತ್ರಿ- ಚಿತ್ತ ಚಂಚಲವಿರದ ಮುನಿವರರೆ! ಪರಿಕಿಪರೆ!
ಹಸುಗೂಸು ನಾನಲ್ಲ. ಬೆದರೆನಾನೀಪೊತ್ತು.
ಮುಂಬರುವ ಜೀವನದ ಸುಖದು:ಖಕೆದೆಗೆಡೆನು

ನಾರದ- ತಿಳಿನೀರ ತಳದಲ್ಲಿ ಕೆಸರು ಕೊಳೆಯಿದೆ ಮಗಳೆ

ಸಾವಿತ್ರಿ- (ಧೃತಿಯಿಂದ)
ಕದಡಿಸೆನು ಮುನಿವರ್ಯ! ತಿಳಿನೀರ ಕುಡಿಯುವೆನು

ನಾರದ- ಕೇದಗೆಯು ಬನದೊಳಗೆ ಅರಳಿಹುದು ಪೊಸ ಪೂವು
ಆದೊಡಂ ಮರೆಯೊಳಗೆ ಏನಿಹುದನರಿವೆಯಾ?

ಸಾವಿತ್ರಿ- ನಾಗರನ ಹೆಡೆಯಿಹುದು. ಹೂವಿರುವ ನೆಲೆಯಲ್ಲಿ
ಹಾವಿಹುದನರಿತಿಹೆನು, ಸೌಂದರ್ಯಕಿದೆ ಸಾವು
ರಾತ್ರಿ ಹಗಲನು ಬಿಡದೆ ಬೆಂಬತ್ತುತಿದೆ ದಿನವು.
ಸುಖದ ಬೆನ್ನೊತ್ತಿಗಿದೆ ಕಷ್ಟ. ಸಿಹಿ ಕಹಿವೆರಸಿ
ಹುಟ್ಟು ಸಾವಿನ ಬೋನಿನಲ್ಲಿ ನಡೆದಿಹುದಾಟ.
ಈ ಲೋಕದಾಟದಲಿ ಗೆಲುವನೇ ಬಗೆದಾನು
ಪೊರಟಿಲ್ಲ. ಸೋಲಿನಲಿ ಹೋರಾಡಿ ಗೆಲುಪಡೆವೆ

ನಾರದ- ಬುದ್ಧಿವಂತಳು ನೀನು ಮಗಳೆ! ನಿನ್ನಂತಹಳ
ನಾನು ಕಂಡಿಹೆನಿಲ್ಲಮಿದುವರೆಗೆ. ನಿನ ಬಾಳ
ಎಣೆಯುಹನು ಸತ್ಯವಾನನೆಹೊರತು ಪೆರರಿಲ್ಲ.
ಸಕಲ ಗುಣ ಸಂಪನ್ನನಿಹನಾದೊಡಂ, ಅವಂ....
ಆತಗಿಹುದೀ ಲೋಪ

ಅಶ್ವಪತಿ- ಒರೆಯುವೇಳ್ಕುಂ ಮುನಿಯೆ!
ಏತರದು ಆಲೋಪ?

ನಾರದ- (ಯೋಚಿಸಿ ನಿರ್ಧಾರಕ್ಕೆ ಬಂದು)
ಸತ್ಯವಾನನು ಇಹನು

ಅಲ್ಪಾಯು. ವಿಧಿಲಿಖಿತವಂತವನು ಮುಂದೊಂದು
ವತ್ಸರದಿ ಸಾಯುವನು. ಪೇಳಬಾರದನಿಂತು
ಪೇಳುತಲಿ ಬೆಲ್ಲದಲಿ ಬೇವನಿಟ್ಟೆನು ಅರಸ

ಅಶ್ವಪತಿ- ಕೇಳಬಾರದ ಕೇಳಿ ಕಳವಳಿಪೆನಾದೊಡಂ
ತಮ್ಮ ನುಡಿಯಿಂದಿಲ್ಲಿಗೊಳಿತಾಯ್ತು ಮುನಿವರ್ಯ!
ಮುಂಬರುವ ಎಡರುಮಂ ಮುನ್ನಮೇ ಕಾಣಿಸುತೆ
ಎನ್ನ ಕಂದಮ್ಮನಂ ಉಳಿಸಿಹಿರಿ.
(ನಿಶ್ಚೇಷ್ಟಿತಳಾದ ಸಾವಿತ್ರಿಯನ್ನು ನೋಡಿ ಕಳವಳದಿಂದ)
ಸಾವಿತ್ರಿ!

ನಾರದ- ಸಾವಿತ್ರಿ! ನಿಂತಲ್ಲೆ ಕಲ್ಲಾಗಿ ಹೋಗಿಹಳು ಸಾವಿತ್ರಿ.
ಮನವನಟ್ಟಿಹಳಾತನೊಳು ಪಾಪ! ಎಂತವಳು
ಸಹಿಸುವಳು ಮನತಾಪ

ಅಶ್ವಪತಿ- (ದಿಗಿಲಿನಿಂದ ಕರೆದು)
ಸಾವಿತ್ರಿ! ಸಾವಿತ್ರಿ!
ಮರುಗದಿರು ಮಗಳೆ ನೀ, ಮರೆತು ಬಿಡು ಆತನನು
ಅಲ್ಪಾಯುವಿರಲವನ ವರಿಸಬಾರದು ನೀನು.
ಆನಿಂದೆ ಪೆರತು ವರನಾನ್ವೇಷಣೆಗೆಯೀದೆ

ನಾರದ- ಅಂತು ನಡೆಯುವುದೊಳಿತು ಅಶ್ವಪತಿ. ದಿಟನುಡಿದೆ
ಸತ್ಯವಾನನನುಳಿದು ಸಾವಿತ್ರಿಗೆಣೆಯಾಹನ
ಆರೈವುದೊಳಿತಿನ್ನು. ಬಿಡುದುಗುಡ

ಸಾವಿತ್ರಿ- (ಮೌನವೊಡೆದು ಧೃತಿಯಿಂದ)
ಮಾನಸದೆ
ಸಾವಿತ್ರಿ ಸತ್ಯವಾನರು ಎಂದೊ ಸತಿಪತಿಗ
ಳಾಗಿಹರು ಮುನಿದೇವ! ಅರಿತವರು ನೀವಿಂತು
ನುಡಿಯಲಾಗದು ತಂದೆ. ಅಲ್ಪಾಯುವಾಗಿರಲಿ,

ದೀರ್ಘಾಯುವಾಗಿರಲಿ. ಆತನಿಹನೆನ್ನ ಪತಿ.
ಮೆಚ್ಚಿಕೆಯು ನನ್ನಾತನಲಿಯೆನಗೆ ಕಾಣಿಸದು
ಕಿರುಲೋಪ. ಲೋಪವಿರದಾವುದಿದೆ ಮುನಿವರ್ಯ?
ಅಲ್ಪಾಯುವಿಂತಲವನನಗಲಲಾರೆನು ಮುಂದೆ
ಬೆಂಬಿಡದೆ ಸಾವನಪ್ಪುವೆನವನ ಜತೆಗೂಡಿ

**ಅಶ್ವಪತಿ-** ಇಂತಾಡದಿರು ಮಗಳೆ! ಸಾವನೆನೆಯದಿರಿಲ್ಲಿ
ಕೆಂಡವನು ಕಂಡಿಂತು ಕೇಸುರಿಯ ಪೊಗಬೇಡ.

**ನಾರದ-** ಪ್ರೇಮ ಆದರ್ಶವನು ನೆಮ್ಮದಿರು ಸಾವಿತ್ರಿ
ಸತ್ಯವಾನನ ನೀನು ಮರೆತು ಬಿಡುವುದೆ ಒಳಿತು

**ಸಾವಿತ್ರಿ-** ಸತ್ಯವಾನನ ಮರೆಯಲಾರೆನೆನ್ನಯ ತಂದೆ
ಸತ್ಯವಾನನ ಮರೆತರಾನೆನ್ನ ಮರೆತಂತೆ
ಅವನನಗಲಿರಲೆನ್ನ ಜೀವವುಳಿಯದು ಮುನ್ನ
ಮನಕಿಹುದು ಒಂದೆ ಮೊನೆಯದು ಆತನೊಳೆನೆಟ್ಟು
ಕಟ್ಟುವಡೆದಿದೆ ಪ್ರೇಮ....

**ಅಶ್ವಪತಿ-** ಇಂತೊರೆಯದಿರು ಮಗಳೆ!
ಹಟವ ಬಿಡು, ಮರೆತುಬಿಡು....

**ಸಾವಿತ್ರಿ-** ಮರೆಯಲಾರೆನು ಪಿತನೆ!
ಮರೆಯೆಂದು ಎನ್ನದೆಗೆ ಕಾದಕೆಂಡದ ಗೆರೆಯ
ನೆಳೆಯದಿರು. ನಿಶ್ಚಲದಿ ಇಹುದೆನ್ನ ಮನ, ಕ್ಷಮಿಸು.
ಸುಖಕಾನು ಹಾರೈಸಿ ಹುಟ್ಟು ಪಡೆದಿಹೆನಿಲ್ಲ.
ಕಷ್ಟದೊಳೆ ಸುಖವನರಸಲಿಕಾನು ಪೊರಟಿರ್ಪೆ
ಹರಸೆನ್ನ ತಂದೆ

**ಅಶ್ವಪತಿ-** ಸೌಭಾಗ್ಯಳಹೆ, ಆದೊಡಂ

**ಸಾವಿತ್ರಿ-** ಆದೊಡಂ ಸಾಧಿಪೆನು. ಸಾವಿನೊಡ ಸೆಣಸುವೆನು
ನನ್ನನಿಯನನು ಕಬಳಿಸಲು ಬರುವ ವಿಧಿಯೊಡನೆ

ಹೋರಾಡಿ ಗೆಲುಪಡೆವೆ. ಸೋತರದು ಸೋಲಲ್ಲ!
ಗೆಲುವಂತೆ ಹರಕೆ ಗೈವುದುಯೆನಗೆ ಮುನಿವರ್ಯ!

**ನಾರದ-** ನಿತ್ಯ ಸೌಮಾಂಗಲ್ಯಪತಿಯಾಗಿ ಬಾಳ್ ತಾಯಿ!

**ಸಾವಿತ್ರಿ-** ಇನ್ನೆನಗೆ ಭಯವಿಲ್ಲ ಮುನಿದೇವ! ಮುತ್ತೈದೆ
ತನವೆನಗೆ ಹರಸಿದಿರಿ. ಪೊಳ್ಳಾಗದಿದು ದಿಟಂ
ತಮ್ಮ ಹರಕೆಯೊಳಿಡುವೆ ನಿಡುನಂಬುಗೆಯ ನಾನು

**ನಾರದ-** ಭಯಗೊಳದಿರಶ್ವಪತಿ! ನಿನ್ನ ಕುವರಿಯು ಮಾನವ
ಪರಿಕಿಸುವ ನೆವದೊಳಾಕೆಯು ಧೈರ್ಯ ಸ್ಥೈರ್ಯವನು
ಕೆರಳಿಸಿಹೆ. ಧೀರೆ ನಿನ್ನಯ ಕುವರಿ. ಸಾವಿತ್ರಿ
ಸತ್ಯವಾನನ ವರಿಸುವೊಡೆ ಬೇಡ ತಡೆ ನಿನದು.
ಸಾವಿನೊಳು ಸರಸವಾಡುವ ಸಾಧ್ವೀಮಣಿಯೀಕೆ
ಗೆಲುವ ಪಡೆವಳು ದಿಟಂ. ಸಂದೇಹಕೆಡೆಗೊಡದೆ
ಸಾವಿತ್ರಿ ಸತ್ಯವಾನರ ಲಗ್ನವಾಗಲಿದು
ಕ್ಷಿಪ್ರದಲಿ
(ಎದ್ದು)
ಬಂದಪೆನ್ ಅಶ್ವಪತಿ, ಸಾವಿತ್ರಿ,
ಬಂದಪೆನ್, ನೋವುಗೊಳದಿರು ಮನದೆ ಎದೆಗೆಡದೆ.
ಪತಿಯ ಬೆಂಬಿಡದೆ ಕಾವುದ ಸಾಧಿಸೌಮಗಳೆ!
ಕೊಲುವ ಯಮನನು ಸೋಲಿಸುವಕಜ್ಜ ನಿನ್ನಿಂದ
ಸಾಧಿಸಲಿ, ನಿನ್ನ ನಾಡಿನ ಕೀರ್ತಿ ಪಸರಿಸಲಿ

**ಸಾವಿತ್ರಿ-** (ತಲೆಬಾಗಿ)
ನಡೆವೆ ನಾನಂತೆ

**ಅಶ್ವಪತಿ.** ನಾ ನಡೆಸುವೆಂ ಮುನಿವರ್ಯ

(ನಾರದರು ಹರಿನಾಮ ಸ್ಮರಣೆಯೊಂದಿಗೆ ತೆರಳುವರು)

— ತೆರೆ —

# ದೃಶ್ಯ ೨

(ಸಾವಿತ್ರಿ ಸತ್ಯವಾನರ ವಿವಾಹ ಕಳೆದು ಒಂದು ವರಷದ ಬಳಿಕ - ಒಂದು ಮುಂಜಾನೆಗು. ಆಶ್ರಮದ ಅಂಗಳದಲ್ಲಿರುವ ತುಳಸಿ ಕಟ್ಟೆಯೆದಿರು ಸಾವಿತ್ರಿಯು ರಂಗವಲ್ಲಿಯನ್ನಿಡುತ್ತಿರುವಳು. ಭಾರವಾದ ಮೌನ ಮುಖ ಮುದ್ರೆ ಒಮ್ಮೆ ಕಳವಳ, ಮತ್ತೊಮ್ಮೆ ಗಾಂಭೀರ್ಯ, ಆಕೆಯ ಮುಖದಲ್ಲಿ ವ್ಯಕ್ತವಾಗುತ್ತಿದೆ. ಪೂರ್ವದಿಗಂತವು ಕೆಂಪೇರಿದಂತೆ ಆಕೆಯ ಮನೋವೇದನೆಯೂ ಏರುತ್ತಿದೆ.)

ಸಾವಿತ್ರಿ- (ದಿಗಂತವನ್ನು ದಿಟ್ಟಿಸಿ, ನಿಟ್ಟುಸಿರಿಟ್ಟು, ದೈನ್ಯತೆಯಿಂದ)
ಮೂಡಬಾನಿಗೆ ರಂಗನೆರಚಿ ಮೂಡುವ ರವಿಯೆ!
ನೀನೇಕೆ ಮೂಡುತಿಹೆ? ನೀನು ಮೂಡುತಲಿಂದು
ಬೆಳಗಬೇಡೀ ದಿನವ. ಈ ದಿನವೆ ನಾನೆಚ್ಚಿ
ನಂಬಿರುವ ಬಾಳ್ವೆಗಂಬವೆ ಮುರಿವದಿನವಿಹುದು.
ತಪದೆ ಕುಳಿತಿರುವೆನ್ನ ಪರಿಕಿಸುವ ವಿಧಿರಂಗ
ವೇದಿಸಕೆ ಕಾದಿಹುದು. ನಾರದರು ಒರೆದಂತೆ
ಎನ್ನರಮಣನ ಚರಮದಿನವಿಂದು ಕೂಡಿಹುದು.
ಇಂತಿರಲು....
(ಕಾತರಳಾಗಿ)
ಕತ್ತಲೆಯೇ! ಕಳೆದೋಡಬೇಡ
ನೀನು ತಡೆದೊಡೆ ಬರುವ ಹಗಲೊಮ್ಮೆ ತಡೆದೀತು
ಎನ್ನಪತಿ ಪ್ರಾಣವುಳಿದೀತು. ಮೂಡದಿರು,
ಓ ಸೂರ್ಯ! ಮೂಡದಿರು. ಜಗಕೆ ಬೆಳಕನು ನೀನು
ಮಾಡದಿರು. ಮುಳುಗಬೇಡೆಲೆ ಚಂದ್ರ! ಮುಳುಗದಿರು
(ಭಯದಿಂದ)
ಇಂಚರದಿ ಹಾಡುತಿಹ ಹಕ್ಕಿಗಳೆ! ಹಾಡದಿರಿ.
ಯಾರ ಸೊಗಕಿಂದು ನೀವ್ ಹಾಡುವಿರಿ? ಇಂದಿನೀ

ಸುಪ್ರಭಾತವ ಹಾಡಿ ಕರೆಯುದಿರಿ ದಿನಮಣಿಯು.
ಉಷಾಮಾತೆ! ನಮಿಸುವೆನು ತಾಯಿ, ನನ್ನಿನಿಯನುಳಿ
ವಂತೆನಗೆ ಹರಕೆಗೈ. ನನ್ನರಸನುಳಿವಂತೆ
(ಸುತ್ತೊಮ್ಮೆ ದಿಟ್ಟಿಸಿ)
ಯಾತಕರಳುತ ಸುವಾಸನೆ ಬೀರಿ ನಗುತಿಹಿರಿ
ಪೂಗಳೇ! ಪೂಜಾದಿ ವಿಧಿಗೋಸುಗವು ನಿಮ್ಮ
ನೋಯಿಸದ ಕೋಮಲ ಹೃದಯಿ ನನ್ನಿನಿಯ ಮಲಗಿಹನು
ಹಾಸಿನಲಿ. ಮುಂಬರುವ ಮರಣವನು ಅರಿಯದಿಹ
ಹಸುಗೂಸ ನಿದ್ದೆಯಲಿ....
(ಕೈಜೋಡಿಸಿ, ಕಣ್ಮುಚ್ಚಿ)
ತುಳಸಿಮಾತೆಯೆ! ಎನ್ನ
ಮಾಂಗಲ್ಯವನು ನೀನು ಉಳಿಸಿಕೊಡು ಮಾತೆ!
(ಕೈ ಬುಟ್ಟಿಯಲ್ಲಿದ್ದ ಹೂಗಳನ್ನು ತುಳಸಿ ಕಟ್ಟೆಯಲ್ಲಿಡುವಳು. ಅಷ್ಟರಲ್ಲಿ ಚೇತೋಹಾರಿ ಸತ್ಯವಾನನು ಪ್ರವೇಶಿಸುವನು)

**ಸತ್ಯವಾನ.** (ಬಳಿಸಾರಿ, ನಿಟ್ಟಿಸಿ, ಮೆಚ್ಚುಗೆಯಿಂದ)
ತುಳಸಿ ಪೂಜೆಯೊಳಿರ್ಪೆಯೇನ್ ಎನ್ನರಮಣಿ!

**ಸಾವಿತ್ರಿ-** (ನಗು ಮುಖದಿಂದ ತಲೆಯೆತ್ತಿ)
ನಿಜ ರಮಣ! ಬಾ ಹೀಗೆ ಪೂಜಿಸುವೆ ತವಚರಣ
(ಬೊಗಸೆ ಹೂವನ್ನು ಪತಿಯ ಪಾದಗಳಿಗಿಟ್ಟು ನಮಸ್ಕರಿಸುವಳು)

**ಸತ್ಯವಾನ-** ನಿತ್ಯ ಮಂಗಲೆಯಾಗಿ ಬಾಳೆನ್ನ ಕಾಂತೆ! ಏಂ
ಮುಗಿಸಿದೆಯ ಇನಿತರೊಳೆ ತುಳಸಿಮಾತೆಯ ಪೂಜೆ?

**ಸಾವಿತ್ರಿ-** ಇಲ್ಲರಸ. ಮುಗಿಸಿಲ್ಲ. ನಿನ್ನ ಬರವನೆ ಕಾದೆ.
ಇಂದು ನಾವಿರ್ವರೂ ಜತೆಸೇರ್ದು ತುಳಸಿಯಂ

ಪೂಜಿಸಲ್ಬೇಕೆಂದು ಮನದ ಬಯಕೆಯೊಳಿಹುದು
ನಡೆಸುವೆಯಾ....

**ಸತ್ಯವಾನ-** ಬೇಡವೇಂದಾನು ತಡೆದೆನೆ ರಮಣಿ!
ಬಾ, ಹೀಗೆ
(ಸತ್ಯವಾನ ಸಾವಿತ್ರಿಯರು ತುಳಸಿಗೆ ಪ್ರದಕ್ಷಿಣೆ ಬಂದು ನಮಿಸುವರು. ಮತ್ತೆ ಸಾವಿತ್ರಿಯ ಮುಖವನ್ನು ದಿಟ್ಟಿಸಿ)
ಸಾವಿತ್ರಿ! ನೀನೇಕೆಯೆನಗಿಂದು
ಪೊಸಬಳಂತಿಹೆಯಲ್ಲ! ಭ್ರಮಿಸಿಪುದೊ ಎನ್ನಮನ!
ಮುಂಬೆಳಗ ನಿದ್ದೆಯಲಿ ಕೆಟ್ಟ ಕನಸೊಂದ ನಾನ್
ಕಂಡಿಹೆನ್ ರಮಣಿ! ನೀನೇಕೆನ್ನನೆಚ್ಚರಿಸಿ
ಬಂದಿಲ್ಲ ವೆಂದಿನೊಲು

**ಸಾವಿತ್ರಿ-** ತಪ್ಪಾಯ್ತು. ಕ್ಷಮಿಸಿನಿಯ!
ನಿಡು ನಿದ್ದೆಯೊಳಗಿರ್ದೆಯಂತಾನು ಕರೆದಿಲ್ಲ
ತುಳಸಿಯಂ ಪೂಜಿಸುತೆ ಪೊಡಮಟ್ಟೆಯಲ್ತೆ ನೀನ್.
ಕೆಟ್ಟ ಕನಸಿನ ಪಾಪ ಪರಿಹಾರವಾದಪುದು.
ತಿಲಕವಿಡುವೆಂ ನಾನು ನಿನ್ನನಿಡುಹಣೆಗಿದೊ!

**ಸತ್ಯವಾನ-** ನಿನ್ನ ನೊಸಲಿಂಗಾನೆ ಬೊಟ್ಟ ನಿಡುವೆನ್ ರಮಣಿ
(ಸತ್ಯವಾನನು ಸಾವಿತ್ರಿಯ ಕೈಯಿಂದ ಕುಂಕುಮದ ಕರಡಿಗೆಯನ್ನು ಸೆಳೆದುಕೊಳ್ಳಲು ಆತನ ಕೈಯಿಂದ ಅದು ಜಾರಿ ನೆಲಕ್ಕುರುಳುವುದು)

**ಸಾವಿತ್ರಿ-** (ಕಳವಳದಿಂದ)
ಏನಿದೀ ಪರಿಹಾಸವೆನ್ನೊಡೆಯ!

**ಸತ್ಯವಾನ-** ಕ್ಷಮಿಸಿನಿಯೆ!
ಪ್ರಮಾದವಾದುದು ಎನ್ನ ಕೈಯಿಂದಲೀದಿನಂ
ಅವಗಳಿಗೆಯೊಳೆದ್ದೆನೋ ಹಾಸನುಳಿದಾನು
ತಿಳಿಯದಿಹೆ.

ಸಾವಿತ್ರಿ- ನಡೆದುದಕೆ ನೆನೆಯದಿರು ಅನುಚಿತವ.
ಶ್ರೀ ತುಳಸಿ ಮಾತೆಯೆಮಗನುದಿಸವು ಮಂಗಲವ
ಕರುಣಿಪಳು. ನಡೆರಮಣ! ಮನೆಗೆ ಪೋಗುವ ನಾವು

ಸತ್ಯವಾನ- ಮನೆಯಿಂದಲೇ ಆನು ಪೊರಟು ಬಂದಿಹೆನಲ್ತೆ? ತಾಯ್ತಂದೆ
ಯರ ಕೂಡೆ ಪೇಳಿ ಬಂದಿಹೆ. ಮುಂದೆ ಅಡವಿಯಿಂ
ಪೊರೆಕಟ್ಟಿಗೆಯನಿಂದು ತರವೇಳ್ಕುಂ ರಮಣಿ! ನೀನ್
ಮನೆಗೆ ನಡೆ

ಸಾವಿತ್ರಿ- ತಡೆ. ರಮಣ! ಒಡನೆ ಬಂದಪೆ ನಾನು

ಸತ್ಯವಾನ- (ಆಶ್ಚರ್ಯದಿಂದ)
ಪೊಸ ಬಯಕೆ! ಈ ಬೆಳಗು ಕಾನನಕೆಯೆನ್ನೊಡನೆ!
ಯಾಕೆ ಪೊರಡುವೆ ರಮಣಿ? ಏನಿಹುದು ನಿನಗಲ್ಲಿ?
ಮನೆಗೆಲಸ ನಿನಗಾಗಿ ಕಾದಿಹುದು ಈ ಪೊಳ್ತು.
ತಾಯ್ತಂದೆಯರ ಬಳಿಯೊಳಾರಿಹರು? ತಡೆ, ನೀನು
ಬರಬಾರದೀ ಪೊತ್ತು

ಸಾವಿತ್ರಿ- ಬಾರದುಳಿಯೆನು ನಾನು
ಕ್ಷಮಿಸಿನಿಯ! ಉದಯಕಾಲದ ಕೆಲಸವೆಲ್ಲವಂ
ಮೊದಲ ಜಾವದೊಳೆದ್ದು ಮಾಡಿಹೆನು. ಮೊದಲಾಗಿ
ಅತ್ತೆ ಮಾವಂದಿರಲಿ ಅನುಮತಿಯ ಕೇಳುವೆನು
ತಡೆಯದಿರು ರಮಣ ನೀನ್, ಎನಗೆ ನಿನ್ನೊಡನೊರ್ಮೆ
ಕಾನನಕೆ ಬರವೇಳ್ಕುಮೆಂಬುದಿದು ಬಹುದಿನದ
ಪಿರಿಯಾಸೆ ನಡೆಸಿಕೊಡು....

ಸತ್ಯವಾನ- (ನಕ್ಕು)
ಲೇಸಾಯ್ತು! ಪೆಣ್ಣದೆಯ
ಬಯಕೆಗಿಹುದೇಯೇನು ಕೊನೆಮೊದಲು! ಚೆನ್ನಾಯ್ತು!

ಆನೇಕೆ ಅಡ್ಡಿಯಾದಪೆ ನಿನಗೆನುಜ್ಜಿಯಂ
ಪಡೆದು ಬಾ, ತಾಯ್ತಂದೆಯರ ಕೂಡೆ

**ಸಾವಿತ್ರಿ-** ಬಂದಪೆನ್

(ಲಗುಬಗೆಯಿಂದ ಸಾವಿತ್ರಿ ಹೊರಟು ಹೋಗುವಳು)

**ಸತ್ಯವಾನ-** ಸಾವಿತ್ರಿ! ತಡೆ, ಎನ್ನಕೊಡಲಿಯಿದೆ ಗೃಹದಲ್ಲಿ
ಮರೆತೆ ನಾನ್

**ಸಾವಿತ್ರಿ-** ತಂದಪೆನ್

(ಮರೆಯಾಗುವಳು)

**ಸತ್ಯವಾನ-** (ಸ್ವಗತ)
ಏಂ ಮರೆವೊ! ಏಂ ಕನಸೊ!
ಕಾಲಗತಿಯಿಂದೇನು ಕಾದಿಹುದೊ....ಅಂತಲ್ಲ
ದೇಕಿಂತು ಬಣ್ಣಗೆಟ್ಟಿಹಳೆನ್ನ ಮನದರಸಿ
ಚಂಡಿಪಿಡಿವಳದೇಕೆಯೆನ್ನೊಡನೆ ವನಕಾಗಿ
(ಪಕ್ಕಕ್ಕೆ ನೋಡಿ)
ಬಂದಪಳ್! ಓ ಅಲ್ಲಿ....
(ಪ್ರಕಾಶವಾಗಿ)
ಬೇಗ ಬಾ, ಸಾವಿತ್ರಿ
ದಣಿವೆನ್ನದೆನ್ನೊಡನೆ ಕಾಲನಿಟ್ಟೆಯ ಜೋಕೆ!
ಪಿಂದಾದೊಡಾನಲ್ಲಿ ತಿರುಗಿನೋಡೆಂ ನಿನ್ನ.
ಪುಲಿಕರಡಿಗಳ ಬಾಯ್ಗೆ....

**ಸಾವಿತ್ರಿ-** (ಬಳಿಸಾರಿ, ಮುಗುಳ್ನಕ್ಕು)
ಅಂತಾಗಲಾ ಇನಿಯ!
ಪೆರತೋರ್ವಳ್ ನಿನಗೆ ಸಿಗುವಳ್ ಜಾಣೆ ಸಾವಿತ್ರಿ
ಎನ್ನ ಪಿತಗೊಬ್ಬಳಾಂಸುತೆಯ್ಕೆಸೆ! ಎನ್ನ ನೀನ್
ಕಾನನದೊಳುಳುಪಿ ಬಾ

**ಸತ್ಯವಾನ-** (ಹೆಗಲಿಗೆ ಕೈಹಾಕಿ)

ಏಂ ಸೊಬಗುಗಾರ್ತಿಯಿಹೆ
ಪೆಣ್ಣೆ! ನೀನಿರ್ಪೆಯೇಂ ಸೀತೆ! ಅಂತಾದೊಡಂ
ಆನಲ್ತು ರಾಮಾನುಜಂ

**ಸಾವಿತ್ರಿ-** ಸೀತೆಯಾದೊಡಾಂ
ರಮಣ ನೀನಹೆಯ ಶ್ರೀ ರಾಮ

**ಸತ್ಯವಾನ-** ರಾಮ! ರಾಮಾ!
ನಿನ್ನ ವಾದದಿ ಗೆಲುವ ಗಂಡರಿಲ್ಲೀ ಜಗದಿ
ನುಡಿದಂತೆ ನಡೆಯೊಡತಿ ಪಿಂದಾಗದಿರು ಮುಂದೆ

**ಸಾವಿತ್ರಿ-** ಬಂದೆನಿದೊ ನಾನ್ ಪಿಂದೆ, ಪತಿಧರ್ಮವಿದನೆಂಬೆ
(ಸತ್ಯವಾನನು ಸಾವಿತ್ರಿಯ ಕೈಹಿಡಿದು ಮುಂದಾಗುವನು. ಸಾವಿತ್ರಿಯು ಆತನನ್ನು ಅನುಸರಿಸುವಳು)

**— ತೆರೆ —**

## ದೃಶ್ಯ ೩

(ಕಾನನದ ದಾರಿ, ಮುಂದೆ ಸತ್ಯವಾನ, ಹಿಂದಿನಿಂದ ಸಾವಿತ್ರಿಯು ಅನುಸರಿಸುತ್ತಿರುವಳು)

**ಸತ್ಯವಾನ-** (ತಡೆದು, ಹಿಂದೆನೋಡಿ)
ಮುಂದಡಿಯನಿಡುರಮಣಿ! ಹಿಂದುಳಿವೆಯೇಕಿಂತು?
ಎಂದಿನೊಲು ಗೆಲುವಿಲ್ಲದಂತಿಹುದು ಮುಖಬಿಂಬ.
ಒಮ್ಮೆ ನಕ್ಕರು ಮೊಗದಿ ಸಂತಸದ ಕಳೆಯಿಲ್ಲ.
ಏನೆನ್ನ ಮಾನದೊಡತಿ? ಏನಾಯ್ತು ಎನ್ನಿಂದ.
ದೊರೆಕೊಂಡುದೇಂ ಪೇಳು ಅರಿಯದಪರಾಧವದು.

**ಸಾವಿತ್ರಿ-** ಇಲ್ಲರಸ! ನಿನ್ನಿಂದ ಎನಗೆಲ್ಲಿಯಪರಾಧ!

**ಸತ್ಯವಾನ-** ಮನಕಾವ ಬಯಕೆ ಪೇಳ್?

**ಸಾವಿತ್ರಿ-** ಇಷ್ಟದೇವತೆ ನೀನು
ಎನ್ನ ಮನಬಯಕೆಯಂ ಬಿಡದೆ ತೀರ್ಚಿಪೆಯಲ್ತೆ!
ಇಂತಿರಲು ಇಲ್ಲರಸ! ಸುಖಿಯಾಗಿಹೆಂ ನಾನು.

**ಸತ್ಯವಾನ-** ತವರ ನೆನಪದು ಮನಕೆ ಮರುಕೊಳಿಸಿತೇಂ ರಮಣಿ!
ಬಯಸಿದೊಡೆ ಕೆಲದಿನಕೆ ಕೊಂಡೊಯ್ದು ಬಿಟ್ಟು ಬಹೆ,
ಎಲೆಮನೆಯ ವಾಸದಲಿ ಅರಮನೆಯ ಸೊಗವ ನೀನ್
ನೆನೆವುದಿದು ಸಹಜವಿದೆ

**ಸಾವಿತ್ರಿ-** ಹಾಗೆನ್ನದಿರು ಕಾಂತ!
ನೀನೆನ್ನ ಬಳಿಯೊಳಿರೆ ಎನಗಾವ ಕೊರತೆಯಿದೆ?
ನಿನ್ನ ಜತೆಯೆಲೆಮನೆಯ ವಾಸವದು ಅರಮನೆಯ
ವಾಸಕಿಂತಲೂ ಮಿಗಿಲು. ತವರಿಗಾಶಿಸೆ ನಾನು

**ಸತ್ಯವಾನ.** (ಮೆಚ್ಚಿಕೆಯ ಮುಗುಳ್ನಕ್ಕು, ಆಕೆಯ ಗಲ್ಲವನ್ನು ಹಿಡಿದು)
ಜಾಣೆಯಿಹೆಯಂತಿರಲು. ಒಮ್ಮೆ ನಗುವಂ ತೋರು!

ಮೊಗವೆತ್ತು
(ಸಾವಿತ್ರಿ ಪ್ರಯತ್ನ ಪೂರ್ವಕ ಮುಗುಳ್ನಗುವಳು)
ಹಾಂ, ಅಂತೆ. ಒಮ್ಮೆ ನಗುನೀ ನಲ್ಲೆ.
ನೀನೇಕೆ ನಗಲೊಲ್ಲೆ? ಕಣ್ಣೊಳೇತಕೆ ನೀರ
ತುಂಬುತಿಹೆ....

**ಸಾವಿತ್ರಿ-** ಇಲ್ಲರಸ....

**ಸತ್ಯವಾನ-** ಮುಂದಡಿಯ ನೀಡು ಕಾಂತೆ!

**ಸಾವಿತ್ರಿ-** ಪಿಂತೆಬಪೆ ನಾಂ ರಮಣ! ಇಂತಿಹುದು ಸತಿಧರ್ಮ

**ಸತ್ಯವಾನ-** ಲೇಸಾಯ್ತು! ಅಂತಿರಲು ಮರಳಿಮೊಗ ಜಾಡಿಸುತ
ಪಿಂದಾದಪೆಯ ಜೋಕೆ! ನಡೆಯೆನ್ನ ಯೆಡ ಭಾಗ
ದೊಳೆ, ನಿನ್ನ ಪಿಡಿದಾನು ನಡೆಗಲಿಸಿದಪೆನಿಲ್ಲಿ.
ಬೇಡವೆಂದೊಡೆ ಬಿಡದೆ ಕಾನನಕೆ ಪೊರಟಿರ್ಪೆ
ಅರಮನೆಯ ಅಂತಪುರವೆಂದರಿತೆಯಾ ವನವ?

**ಸಾವಿತ್ರಿ-** ಹಂಗಿಸದಿರೆನ್ನೊಡೆಯ! ಮನಕೇನೊ ಬೆದರಿಕೆಯು
ಭಯಮಾವರಿಪುದೆನ್ನ ಎದೆಗೀಗ ಚಣಚಣಕೆ

**ಸತ್ಯವಾನ-** ಕಾನನವ ನೋಡುತಿಂತೇಕೆ ಬೆದರುವೆ ರಮಣಿ!
ಸನಿಹದೊಳಗಿಹೆನಲ್ತೆ! ನಿನಗಾವಭಯವಿಹುದು?
ಬಹುದಿನದ ನಿನ್ನ ಬಯಕೆಯು ಇಂದು ಸಂಗಮಿಸಿ
ಕಾದಿಹುದು. ವನಸೊಬಗನುಣಬಯಸಿ ಕಾದಿರ್ದ
ನಿನ್ನ ನಾನ್ ಕರೆತರಲುವುಳಿದಿರ್ದೆ ನಿದುವರೆಗೆ.
ಮುಂದೆ ನೋಡೌರಮಣಿ! ರಮಣೀಯ ದೃಶ್ಯಗಳ
ಕೋಡಗಲ್ಲಿಂ ಜಗಿವನದಿತಾನು ಧುಮುಕುವಳ್
ನೀರ್ಪನಿಯ ಚಿಮ್ಮುತ್ತೆ. ಬಾ! ಅಲ್ಲಿ ನೀರ್ಬುರುಗ
ನೊಡೆವಲ್ಲಿ! ತೆರೆತೆರೆಯು ಮೇಲೇರ್ದು ಪೊಯ್ಯುವ

**ಸಾವಿತ್ರಿ-** ಬೇಡರಸ! ಅತ್ತೊರೆಯೊಳಿರಬಹುದು ನೆಗಳೆಗಳ್

**ಸತ್ಯವಾನ-** ಭಯಪಡದಿರೆನ್ನಿನಿಯೆ! ಆ ಕಡೆಗೆ ದಿಟ್ಟಿಯಿಡು
ಗಂಡಾನೆಗಳು ನೀರಮೊಗೆಯುತಿವೆ ಸೊಂಡಿಲಲಿ
ಗಂಡಾನೆ ತಾನ್ ತನ್ನಯಿನಿಯೆಯಂಗಕೆ ಸೇಸೆ
ಯಿಕ್ಕುತಿದೆ. ನೋಡಲ್ಲಿ! ನೀರ್ಕ್ರೀವಿಯಾಟಂ!
ಬಾತು ಹಂಸೆಗಳೆಂತು ತೇಲುತಿವೆಯೊಡ ಬೆರೆತು!
ಗಂಡಂಚೆಯೊಡಗೂಡಿ ಹೆಣ್ಣಂಚೆ ಕುಕ್ಕುತಿದೆ
ಕುಮುದನಾಳವ ನೋಡು! ಝೇಂಕರಿಪ ತುಂಬಿಗಳ!
ಬಿರಿದ ಕಮಲವ ನಿನ್ನ ಮುಡಿಗೆ ತರಲೇಂ ಪೇಳು
(ಸತ್ಯವಾನನು ಸಾವಿತ್ರಿಯ ಕೈಬಿಟ್ಟು ಮುಂದಾಗಲು, ಆಕೆ
ಆತನನ್ನು ಹೋಗಗೊಡದೆ ಹಿಡಿದುಕೊಳ್ಳುವಳು)

**ಸಾವಿತ್ರಿ-** ಬೇಡಿನಿಯ! ಬಿಟ್ಟೆನ್ನ ಪೋಗದಿರು ನೀಡೂರ

**ಸತ್ಯವಾನ-** ಕಳವಳಿಪೆಯಾಕಿನಿಯೆ! ನೋಡದೋ ಹರಿಣಗಳ!
ಗಂಡು ಹರಿಣನ ಕೋಡಸೋಂಕಿಂಗೆ ಮೈಮರೆತು
ನಿಂತಿರ್ಪ ಪೆಣ್ಮೃಗವ! ಮಗ್ನವಾಗಿವೆ ಸೊಗದಿ....

**ಸಾವಿತ್ರಿ-** ಪುಲಿಸಿಂಗಗಳ ಬಾಯ್ಗೆ ಎಂದು ತುತ್ತಾದಪವೊ

**ಸತ್ಯವಾನ-** (ಸಂತೈಸಿ)
ಸರಸದೊಳು ಸಾವನೆನೆಯುವ ಕಾಂತೆ! ಕೇಳಲ್ಲಿ!
ಹಾಡುತಿವೆಯಿಂಚರದಿ ವನಪಕ್ಷಿ. ಪಿಕಳಾರ
ಗುಬ್ಬಿ, ಕೊಟ್ಟುಗ, ಮೈನ ಕೋಗಿಲೆಯು ಕಾಜಾಣ
ನಿಡುಸರದಿ ಕೂಗುತಿವೆ. ಮುಸುವ ಭಲ್ಲೂಕಗಳು
ಮೆಲ್ಲುತಿವೆಯಿನಿವಣ್ಣ! ಚಿಗುರುತಿಹ ಇಮ್ಮಾವು
ನಿಂತಿಹುದು ನೋಡಲ್ಲಿ! ಹೂದೇರಿನಂದದಲಿ
ಗಿಡಗಳಲಿ ಅರಳಿರುವ ಕಮ್ಮಲರ್ಗಳ ತಂದು
ನಿನ್ನ ಮುಡಿ ಸಿಂಗರಿಸಲೇಂ ಪೇಳು? ತಂದಪೆನ್
(ಹೋಗುವನು)

**ಸಾವಿತ್ರಿ-** (ಕಳವಳದಿಂದ, ಮರೆಯಾದ ಪತಿಯು ಹೋದದಿಕ್ಕನ್ನೇ
ನೋಡುತ್ತಾ ನಿಡುಸುಯ್ದು - ಸ್ವಗತ)
ಏಂ ವಿಧಿಯೆ! ನಿನ್ನದೀ ಮರುಳಾಟವೇಪ್ರೊತ್ತು!
ಸಾವೆ ಬೆನ್ನೊಳು ಕಾದು ನಿಂತಿರಲು ಅರಿಯದಿಹ
ಮಾನವನ ಸರಸವಾಡಿಸುತಿಹೆಯ ನೀನಿಂತು?
ಇಂದಿನಹ ಮರಣವನು ಅರಿಯನೆನ್ನಯ ಪತಿಯು.
ಎನಿತು ಗೆಲುವಿಹನಿಂದಿನೊಂದೊಂದು ಗಳಿಗೆಯೊಳು
ನಿರ್ವಾಣವಾಗಲಿಹ ಜ್ಯೋತಿಯಂದದ ಪ್ರಭೆಯೊ!
ಆತನಾಡುವ ಸರಸವೆನ್ನದೆಯನುರಿಸುತಿದೆ.
ಆನೋರ್ವಳಲ್ಲದೆಯೆ ಪೆರರಾರು ಅರಿಯರಿದ
(ಅಷ್ಟರಲ್ಲಿ ಉತ್ಸಾಹದಿಂದ ಸತ್ಯವಾನನು ಓಡಿಕೊಂಡು
ಹೂಗಳನ್ನು ಹಿಡಿದು ಬಂದು)

**ಸತ್ಯವಾನ-** ಇದೊ ರಮಣಿ! ತಲೆ ತುಂಬ ಮುಡಿಯಿದನ್
(ಸಾವಿತ್ರಿಯ ಕೈಗಿಡುತ್ತಾ, ತಡೆದು)
ಇಲ್ಲ, ತಡೆ
ನಿನ್ನ ತುರುಬಿಂಗಿಡುವೆ ಆನಿಲ್ಲೆ
(ಮಡದಿಯ ತುರುಬಿಗೆ ಹೂ ಮುಡಿಸುವನು)

**ಸಾವಿತ್ರಿ-** (ಮುಡಿಸಿಕೊಂಡು, ತುಸುತಡೆದು)
ಪೊತ್ತೇರಿ
ಪೊತ್ತಾಯ್ತು. ಪಿಂತಿರುಗಲಣೆಗೆ ವನಾವ್ ರಮಣ!

**ಸತ್ಯವಾನ-** ದಿಟ ರಮಣಿ! ಆಶ್ರಮದೆ ತಾಯ್ತಂದೆ ಕಾದಪರು.
ಎಮ್ಮ ಬರವನೆನೆನೆದು ದಣಿವಪರು. ಕಟ್ಟಿಗೆಯ
ನಾನಿನಿತರೊಳೆ ಬಳಿಯ ಮರವೇರಿ ಕಡಿದಪೆನ್
ದಣಿವನಾರಿಸುನೀನು ಈ ಬಂಡೆಯೊಳೆ ಕುಳಿತು

**ಸಾವಿತ್ರಿ-** (ಭಯ, ಕಳವಳದಿಂದ)

ತನೆ ರಮಣಿ! ಕ್ಷಣಕಾಲ ದಣಿವನಾರಿಸು ನೀನು
ಇದುವೆ ಬಂಡೆಯೊಳೊರಗಿ ಜತೆಗೆನ್ನ

ತ್ಯವಾನ — ನಿಜರಮಣಿ
ದಣಿದಿಹೆಂ ನಾನ್ ನಿಜಕು

ಾವಿತ್ರಿ- ಹೀಗೆ ಬಾ, ಎನ್ನರಸ!
(ಸಾವಿತ್ರಿಯು ಸತ್ಯವಾನನ ಕೈಹಿಡಿದು ಬಳಿಯ ಹಾಸು ಕಲ್ಲಿನ ಮೇಲೆ ಕುಳಿತುಕೊಳ್ಳುವಳು. ಸತ್ಯವಾನನು ಶೂನ್ಯ ದೃಷ್ಟಿಯಿಂದ ಸುತ್ತೊಮ್ಮೆ ನೋಡಿ ವಿಶೇಷವಾಗಿ ಆಯಾಸಗೊಂಡವನಂತೆ)

ತ್ಯವಾನ- ಸಾವಿತ್ರಿ

ಾವಿತ್ರಿ- (ಗಮನಿಸಿ, ಕಳವಳದಿಂದ)
ಏಂ ಇನಿಯ!

ತ್ಯವಾನ- ತಲೆತಿರುಗುತಿದೆಯೆನಗೆ
ಸಾವಿತ್ರಿ....

ಾವಿತ್ರಿ- (ಗಾಬರಿಯಿಂದ)
ಎನ್ನಿನಿಯ....

ತ್ಯವಾನ- (ತಡೆ ತಡೆದು)
ಮನವನಾವರಿಸುತಿದೆ
ಭಯವೇನೊ ಸಾವಿತ್ರಿ! ಶೈತ್ಯದಲಿ ನಡಗುತಿದೆ
ಒಡಲೆನ್ನ ಸಾವಿತ್ರಿ

ಾವಿತ್ರಿ- ಇನಿಯ ನೀ....

ತ್ಯವಾನ- ಬೆವರುತಿದೆ
ಬಾಯೂರುತಿದೆಯೆನಗೆ ಸಾವಿತ್ರಿ....

ಾವಿತ್ರಿ- (ಅಸಹಾಯಕತೆಯಿಂದ)
ಏಂ ಗೈವೆ?

ತೋಚದಿಹೆ. ತೊಡೆಯ ಮೇಲ್ಮಲಗಿಸಿಯ
(ಸತ್ಯವಾನನನ್ನು ತೊಡೆಯ ಮೇಲೆ ಮಲಗಿಸಿಕೊಳ್ಳುವಳು)

**ಸತ್ಯವಾನ-** (ನರಳಿ)
ಸಾವಿತ್ರಿ....

**ಸಾವಿತ್ರಿ-** ಗಾಳಿ ತೀಡುವೆನಿದೊ ಸೆರಗಿಂದೆ

**ಸತ್ಯವಾನ-** ಸಾವಿತ್ರಿ....
ಕಾನನವೆ ಬುಗರಿಯಂದದೆ ತಿರುಗಿ ಸುತ್ತುತಿದೆ.
ಕಣ್ಣೆರಡಕೂ ಮಬ್ಬುಗವಿಯುತಿದೆ ಸಾವಿತ್ರಿ

**ಸಾವಿತ್ರಿ-** (ದಿಕ್ಕು ತೋಚದೆ)
ಏಂ ವಿಧಿಯೆ! ನಿಷ್ಕರುಣೆ! ಇಲ್ಲದಾಯಿತೆ ನಿನಗೆ
ಎನ್ನ ಪತಿಯೊಳು ಕರುಣೆ

**ಸತ್ಯವಾನ-** ಸಾವಿತ್ರಿ....

**ಸಾವಿತ್ರಿ-** ಎನ್ನಿನಿಯ!

**ಸತ್ಯವಾನ-** (ಅತಿಯಾದ ವೇದನೆಯಿಂದ)
ಸಹಿಸಲಾರೆನು ನೋವ ಸಾವಿತ್ರಿ

**ಸಾವಿತ್ರಿ-** ಏಂ ಗೈಯ
ಲರಸ ನಾನ್

**ಸತ್ಯವಾನ-** ಎದೆ ನೋಯುತಿದೆ ಮಡದಿ. ಬಲಗುಂದಿ
ದನಿಯೆಳೆಯೆ ಬಾರದಿದೆ. ಬದುಕುವೆನೋ ನಾನೇತು

**ಸಾವಿತ್ರಿ-** (ಬಿಗಿದಪ್ಪಿ ಹಿಡಿದು)
ಎನ್ನನುಳಿಯುತ ನೀನು ಮುಂದೆ ಪೋಗುವೆಯೆಲ್ಲಿ
ಕಾನನದ ಮಧ್ಯದಲಿ ನೀನೇಕೆ ಬಸವಳಿದೆ
ಹಾ! ಎನ್ನರಮಣ, ನಿನಗೀ ವಿಧಿಯೆ

**ಸತ್ಯವಾನ-** (ನರಳುತ್ತಾ, ಹೊರಳಿ)
ಸಾವಿತ್ರಿ....

ಬದುಕಲಾರೆನು ನಾನು ಸಾವಿತ್ರಿ... ನಾವೇಕೆ
ಈ ಹೊತ್ತು ಕಾನನಕೆ ಬಂದೆವೋ ನಾನರಿಯೆ.
ಆಶ್ರಮದೆ ತಾಯ್ತಂದೆಯೆನಿತು ಮನ ನೋಯುವರೊ!
ಎಂತು ಮರಳುವೆ ನೀನು ಸಾವಿತ್ರಿ!

ಸಾವಿತ್ರಿ- ಎನ್ನರಸ....
ಮರಳಲಾರೆನು ನಾನು. ನಿನ್ನನುಳಿದೆನಗೆಲ್ಲಿ
ನೆಲೆಯಿಹುದು? ಬೆಂಬಿಡದೆ ಬಂದವಳು ನಿನ್ನ ಬಿಡೆ

ಸತ್ಯವಾನ- (ಅತಿಯಾದ ವೇದನೆಗೊಂಡು)
ತಾಳಲಾರೆನು ನಾನು ಸಾವಿತ್ರಿ

ಸಾವಿತ್ರಿ- (ಹೌಹಾರಿ ಕಂಗೆಟ್ಟು)
ರಮಣ ನೀನ್....

ಸತ್ಯವಾನ. (ದನಿಗುಂದಿ)
ಉಳಿಯಲಾರೆನು ನಾನು ಸಾವಿತ್ರಿ....

ಸಾವಿತ್ರಿ- (ದಿಗಿಲಿನಿಂದ)
ಎನ್ನಿನಿಯಾ....

ಸತ್ಯವಾನ. (ಯಾತ್ನದಿಂದ)
ಬದುಕಲಾರೆನು ನಾನು

ಸಾವಿತ್ರಿ- (ಬಿಗಿದಪ್ಪಿ)
ತಡೆ ರಮಣ

ಸತ್ಯವಾನ- (ತಡೆತಡೆದು)
ಸಾ....ವಿ....ತ್ರಿ....
(ಒಮ್ಮೆಗೇ ಸತ್ಯವಾನನು ಸಾವಿತ್ರಿಯ ಮಡಿಲಿನಲ್ಲಿ ಜೋತು ಬೀಳುವನು. ಸಾವಿತ್ರಿಯು ಪತಿಯ ದೇಹದ ಮೇಲೆ ಬಿದ್ದು 'ಹಾ! ವಿಧಿಯೆ' ಎಂದೂ ರೋಧಿಸುವಳು)

— ತೆರೆ —

# ದೃಶ್ಯ ೪

(ಮುಸ್ಸಂಜೆ. ಕಾನನದಲ್ಲಿ ಸಾವಿತ್ರಿಯೋರ್ವಳೆ ಸತ್ಯವಾನನನ್ನು ತೊಡೆಯ ಮೇಲಿರಿಸಿಕೊಂಡು ನಿಟ್ಟುಸಿರಿಡುತ್ತಿರುವಳು)

ಸಾವಿತ್ರಿ- ಹಾ! ರಮಣ, ನೀನೇಕೆ ಬಸವಳಿದೆ! ಮೈಮರೆತೆ!
ಕಂದಿತೇ ನಿನ್ನೊಡಲು, ನಂದಿ ಹೋದುದೆ ಬೆಳಕು!
ನಡುವಗಲ ದಿನಕರನ ಕವಿದುದೇತಕೆ ಮೋಡ?
ನಡು ಬಯಲಿನಲಿ ಹರಿವ ನಿಡುನಂಬುಗೆಯು ಎನ್ನ
ಬದುಕ ತೊರೆಯೆ! ಆರದಿರು. ರಮಣ! ಎದ್ದೇಳು!
(ಮೈದಡವಿ)
ನೀನೇಕೆ ಮಲಗಿರ್ಪೆ ಅಡವಿಯೊಳು ಮೈಮರೆತು.
ಪ್ರೊತ್ತಿಳಿಯುತಿದೆ ಕಾಂತ! ಸಂಜೆ ಹೊಂಬಣ್ಣದಾ
ಹೂಮುಗಿಲ ಹಸೆ ಹಾಸಿ ಪಕ್ಕಿಗಳ ಕಲಕಂಠ
ರವದಿ ಕರೆವುದು ನಿನ್ನ, ಸಂಜೆ ದನಿಗೇಳು ನೀನ್
ಮಲಗಬಾರದು ಕಾಂತ!
(ನಿಟ್ಟುಸಿರಿಟ್ಟು)
ಎಂದು ಕಳೆಗುಂದದೀ
ಮೊಗದಂದ ಗೆಟ್ಟಿತೇತಕೆ ಪೇಳು! ಕಾವಿರದು
ಮೈಯಲ್ಲಿ, ಮಿಡುಕದಿದೆ ನರನಾಡಿ, ಉಂಗುಟದೊ
ಳಿಲ್ಲರಜ, ಕಣ್ಣಾಲಿ ಕಪ್ಪಾಗಿ ಕೆಡೆದಿರ್ಪ
ಕೆತ್ತನೆಯ ತೆರದಿ ನಿಡುನಿದ್ದೆಯೊಳಗಿಳಿದೆಯೇ
ಕೆನ್ನ ಪ್ರಿಯರಮಣ! ಏಳ್, ಎದ್ದೇಳು ಎನ್ನರಸ!
(ಬಿಕ್ಕಳಿಸಿ)
ಬಾಳ ಕಡಲೊಳಗೆಮ್ಮ ಸಾರ ಸಂಸಾರ ಹರಿ
ಗೋಲಹುಟ್ಟನು ಹಿಡಿದ ನೇತಾರ! ನಡುನೀರ

ಮಡುವಿನೊಳು ಹುಟ್ಟನುಳಿಯುತಲೆನ್ನ ಕೈ ಬಿಟ್ಟೆ.
ಕಾಂತ! ಎನಗಾರು ಗತಿ? ಅತ್ತೆ ಮಾವಂದಿರನು
ಸಂತೈಪರಾರಿಹರು? ಎಂತೊರೆಯಲವರಿಗೀ
ದಾರುಣದ ವಾರ್ತೆಯನು? ಹೇಳು! ನೀನೆದ್ದೇಳು!
(ತಲೆಯೆತ್ತಿ ಪಡುದಿಗಂತದ ಕಡೆಗೆ ದೃಷ್ಟಿಯಿಟ್ಟು)
ಪಡುಗಡಲ ಕಡೆ ಸಾರ್‍ವಗಳಿಗೆ ಬಟ್ಟಲೆ! ನೀನು
ಮುಳುಗಬೇಡೆಲೆ ಸೂರ್‍ಯ! ಕಾರಿರುಳನೆನ್ನೆದೆಗೆ
ತರಬೇಡ. ಎನ್ನೆದೆಯು ಬೆಂದಿಹುದು. ಕಂದಿಹುದು
ನೊಂದಿಹುದು-ಮೃತರಮಣನನು ತೋಳ ತೆಕ್ಕೆಯಲಿ
ಮಲಗಿಸುತ ದಿನಗಳೆವೆ. ಇಂತು ಕಳೆಯಲಿ ದಿನವು.
ಆಗಲಲಾರೆನುಯಿವನ. ಮುಳುಗದಿರು. ಓ ರವಿಯೆ!
ಮುಳುಗದಿರು!
(ಮೂಡಣಕ್ಕೆ ಮುಖತಿರುಗಿಸಿ)
ಉದಯಿಸುತ ಚಂದ್ರಿಕೆಯು ನೆರಚದಿಳು
ಓ ಚಂದ್ರ! ಪೊತ್ತಲ್ಲವಿದು ನಿನಗೆ! ಆನಂದ
ಪೆಸಗಿಲ್ಲ. ನಿನ್ನ ಕರದಮೃತ ಕಿರಣಗಳಿಂದ
ನಿದ್ರಿಸಿಹ ಪತಿಯನೆಬ್ಬಿಸಲಾಪೆಯಾ ಪೇಳು!
ನಗುನಗುತ ಮರೆಯಾದೆಯಾ ಮುಗಿಲ ಒಡ್ಡಿನಲಿ.
(ಕ್ರೊಧದಿಂದ)
ಪೋಗು! ನೀನ್ ಹಾಳಾಗು! ಪಕ್ಷ ಪಕ್ಷದಿ ಕ್ಷಯಿಸು.
ನೋಡದಿರಲಾವಗಂ ವಿರಹಿಗಳ್ ನಿನ್ನ ಮೊಗ.
ಎನ್ನೆದೆಯ ಉರಿ ನಿನ್ನನೇಗಳುಂ ಸುಡುತಿರಲಿ
(ನಿರಾಶಳಾಗಿ)
ದಿನಮಣಿಯೆ! ನೀನು ಹಾ! ಮುಳುಗಿದೆಯ ಮರುಮರುಗಿ.
ಮುಳುಗು! ನಿನ್ನಯ ನಿಶಾಕಾಂತೆ ಕಾದಿಹಳಲ್ಲಿ.
(ದೀನಳಾಗಿ)

ಬಾ ಇರುಳೆ! ಕಾರಿರುಳೆ ಬಳಿಗೆ ಬಾ! ನೀನೆನಗೆ
ಒದಗಿರುವ ಜೀವನದ ಸಂಗಾತಿ! ನೀನೆನ್ನ
ಕಣ್ಣೆರದ ಜೀವನಕೆ ಕತ್ತಲೆಯು ಜೋಡಿಸೌ ..
ಎನ್ನನಿಟ್ಟುಸಿರೊಡನೆ ನಿನ್ನುಸಿರ ಕೂಡಿಸೌ
ಕಂಬನಿಯು ತುಂಬುತೆನ್ನಯ ಕೂಡೆ ಕೊರಗು ನೀನ್
ಮೌನದಲಿ. ಕಾರಿರುಳೆ! ಕಾವಲಾಗಿರು ಎನಗೆ....
ಎನ್ನ ಪ್ರಿಯ ಪತಿಯು ಕಾಪಿಡುವುದಕೆ ನೆರನೀಡು.
ಬಾ ತಾಯೆ!

(ಬಾನೆಡೆಗೆ ನೋಡಿ)

ಸಾಸಿರದ ಸಂಖ್ಯೆಯೊಳು ಮಿನುಗುತಿಹ
ಚುಕ್ಕೆಗಳೆ! ನೆನೆಯದಿರಿ. ನೀವೇಕೆ ನೋಯುವಿರಿ
ಎನ್ನ ಪಾಪಕೆ ಬೆಂದು! ಗಗನವೇ, ಗಜರದಿರು
ಗುಡುಗುಡಿಸಿ.

(ಅಂಗಲಾಚಿ)

ಎಲೆ ಭೂಮಿತಾಯೆ! ನೀನ್ ಮೈದೋರಿ
ಬದುಕಿಪೆಯ ನಿನ್ನ ಕಂದನ ಜೀವ. ಕಾನನವೆ!
ವನ ತರುಗಳೇ! ಲತಾ ಪುಂಜಗಳೆ! ಮೃಗ ಮೃಗಾ
ಳಿಯೆ ಬಂದು ಜಡದೇಹಿಗೆರೆಯಿರೌ ಚೈತನ್ಯ.
ಮಂದಮಾರುತ! ಎನ್ನ ಪತಿಯನುಸಿರಾಡಿಸೈ.

(ಹಾತೊರೆದು)

ಇಂಚರದ ಪಕ್ಕಿಗಳೆ! ಮೌನದಿಂದಿಹಿರೇಕೆ?
ಕೂಗಿ ಕರೆದೊಡೆ ನಿಮ್ಮಯಿಂಚರಕೆಯೆನ್ನಪತಿ
ಎಚ್ಚರಂಗೊಳುವ ದಿಟ.

(ಕೈಗಳನ್ನೆತ್ತಿ)

ದೆಸೆಯದೇವತೆಗಳಿರ!
ಕಾಪಿಡುವುದೀ ನಿಮ್ಮ ಎದೆಯ ಕಂದನ ನಿಂದು.

(ಆರ್ತಳಾಗಿ)
ಅಯ್ಯೊ! ಬರಲಾರಿರಾ! ನೀವೆನ್ನ ನೆರವಿಂಗೆ
ಬಿಟ್ಟುಳಿದಿರೇಯೆನ್ನ ನೊಂದ ಅಬಲೆಯ ಸಂಕಟ!
ಅಕಟಕಟ ಇಂತಾಯ್ತೆ!
(ಸುತ್ತು ಆಲಿಸಿ ನೋಡಿ ತಿಳಿದು, ಕ್ರೋಧದಿಂದ)
ಆರು ಸುಳಿಯುವರಿಲ್ಲಿ?
ಆರಿವರ್! ಮುತ್ತುತಿಹರೀಯೆನ್ನ ಪತಿಪ್ರಾಣ!
ತೊಲಗುವುದು ವಿಕರಾಳ ರೂಪುಗಳೆ!
(ಗರ್ಜಿಸಿ)
ತೊಲಗುವುದು.
ಮುಟ್ಟುವಿರ ಜೋಕೆ! ಸದ್ಧರ್ಮವಲ್ಲಾನು ಮನ
ವಿಟ್ಟು ನಡೆದಿಹೆನಾದೊಡೆಯು ಪಾತಿವ್ರತ್ಯದೊಳು
ನಡೆದು ಬಂದಿಹೆನಾದೊಡೆಯು ಮುಟ್ಟಲಾರಿರೌ!
(ಶಾಂತಳಾಗಿ)
ಎಲೆ ಧರ್ಮದೇವತೆಯೆ! ನೀನೆನಗೆ ನೆರವಾಗು.
ತೊಲಗಿದಿರ! ಆಂತೆ ತೊಲಗಿರಿ ನೀವು, ಮುಟ್ಟದಿರಿ
ಎನ್ನರಮಣನ
(ಮೃತ ಶರೀರವನ್ನೆತ್ತಿ)
ಏಳು! ಏಳೆನ್ನ ಮನದಿನಿಯ!
ಕಾರಿರುಳ ಪೊತ್ತಿನಲಿ, ಕಾರಡವಿದೊಟ್ಟಿಲಲಿ
ಮಲಗಿ ನಿದ್ರಿಪ ಭಾಗ್ಯ ನಿನಗಾಯ್ತೆ! ಹಾ ರಮಣ!
ಏಂದು ಕವಿಯದ ನಿದ್ದೆ ಕವಿಯಿತೇ ನಿನಗಿಂದು.
ಧರ್ಮದೇವತೆಯೆಮಗೆ ಮುನಿದಳೆ! ಹತಭಾಗ್ಯೆ
ಹತಭಾಗ್ಯಳಾನಿಹೆನು.
(ಒಮ್ಮೆಗೇ ಚಕಿತಳಾಗಿ ಚೇತರಿಸಿ)
ಆವುದೀ ಪೊಸ ಬೆಳಕು!

ಕಟ್ಟಿರುಳ ಜೊಟ್ಟೆಯಲಿ ಸತ್ಯ ಕಾಂತಿಯು ರೂಪ
ಸೌಂದರ್ಯದೊಳ್ಮಿಂದು ಎಸ್ನದಿಸು ನಿಂದಿಹುದು!
(ಗಂಭೀರ ಮುಖಮುದ್ರೆಯಿಂದೊಪ್ಪುವ ಯಮಧರ್ಮ
ನು ಪಾಶವನ್ನು ಕೈಯಲ್ಲಿ ಹಿಡಿದು ಗೋಚರಿಸುವನು)

**ಸಾವಿತ್ರಿ-** (ಪ್ರಕಾಶವಾಗಿ)
ಆರು ನೀನ್! ನುಡಿಯೆನಗೆ, ಮಾನವ ಸ್ವರೂಪಿ

**ಯಮಧರ್ಮ-**(ಗಂಭೀರ ವಾಣಿಯನ್ನು ಮೃದುಗೊಳಿಸಿ)
ಬೆದರದಿರು! ಆನಿಹೆನು ಧರ್ಮದೇವತೆ, ಮಗಳೆ!

**ಸಾವಿತ್ರಿ-** (ಅರಿತು-ಆತುರದಿಂದ)
ಓ ತಂದೆ! ಯಮಧರ್ಮದೇವ! ನೀ ಕರುಣೆಯಿಂದು.
ನಮಿಸುವೆನು. ನಾ ನಿನ್ನ ವತ್ಸೆ. ಕಾಪಿಡುವುದೈ!
ಎನ್ನ ಮಾಂಗಲ್ಯವನು....

**ಯಮಧರ್ಮ-**(ತಲೆದೂಗಿ)
ಮೆಚ್ಚಿಹೆನ್ ನಿನಗೆ ನಾನ್.
ಎನ್ನನೀರೂಪಿನೊಳು ಕಂಡ ಮಾನವರಿಲ್ಲ.
ಭಾಗ್ಯವಂತಳು ನೀನು ಮನುಜರೊಳಪೂರ್ವಳಿಹೆ.
ನಿನಗೇಕೆ ಮಿಕ್ಕೆನ್ನ ಪರಕೆಗಳ್

**ಸಾವಿತ್ರಿ-** ಬಂದುದಕೆ
ಜೀವದಾನವ ನೀಡು ಯೆನ್ನ ಪತಿಪ್ರಾಣವನು.
ಸತಿಯಾನು ಬೇಡುವೆನು. ಎಲೆ ಧರ್ಮದೇವತೆಯೆ!

**ಯಮಧರ್ಮ-**ಸತ್ತವರು ಬದುಕಲಾರರು ಮಗಳೆ! ಕಳೆದ ದಿನ
ಮರಳಲಾರದು ಮತ್ತೆ. ಬಾಡಿದರಳದು ಮರಳಿ
ಅರಳಲಾರದು ಕುವರಿ! ಭ್ರಮೆಯ ತೊರೆ ಬಯಕೆಯಂ...

**ಸಾವಿತ್ರಿ-** ಉಳಿಯಲಾರೆನು ದೇವ, ಪತಿಯ ಜೀವವನಗಲಿ

**ಯಮಧರ್ಮ**-ಸಾವು ಜೀವಕೆ ನಂಟು. ಅದನು ತಪ್ಪಿಸ ಸಲ್ಲ.
ಸಾಸಿರದ ಶೂರರಿಹರೇ ಕಂದ, ಈ ಜಗದಿ!
ಧರ್ಮದೇವತೆಯೆ ಆನಾದೊಡಂ ಮೀರೆಸಿದ
ಕೊಲುವ ಅಧಿಕಾರಿಯಾನಾದೊಡಂ ಸಾವುದನು
ತಡೆಯಲೆನಗಿನಿತಿಲ್ಲವಧಿಕಾರ. ಆಯುಷ್ಯ
ಮುಗಿದ ಮಾನವ ಜೀವವೆಣ್ಣೆಬತ್ತಿದ ದೀಪ
ವಾರಲೇ ಬೇಕಮ್ಮ

**ಸಾವಿತ್ರಿ**- ಕರುಣೆಯಿಡು ಎಲೆಧರ್ಮ!
ಕೊಲುವ ಯಮ ನಿಷ್ಕರುಣಿಯೆಂದಪರ್. ಆದೊಡಂ....
ಎನಗೆನಿತು ದಯೆಯ ಬೀರುವೆ ನೀನು! ಹಸಿದಿರುವ
ಬಾಯ್ತುತ್ತ ಕಸಗೊಳುವುದಿದು ಧರ್ಮವೇನ್ ತಂದೆ?

**ಯಮಧರ್ಮ**.ನಿನಗೊರ್ವಳಿಗೆ ಪೆರತು ಧರ್ಮ ಬರೆದಿಲ್ಲ ಮಗು.
ಬಿದಿಯ ಲೆಕ್ಕಣಿಗೆಯೊಳು ಬಿದ್ದ ಮಸಿ ಮಾಸದಿದು.
ಬಿದಿಬರೆಹವಿಂದುತನಗಧರ್ಮವಾದೊಡ ಸರಿಯೆ
ಮರುನುಡಿಯನೆತ್ತದೆಯೆ ಶಿರಬಾಗುವುದು ಧರ್ಮ

**ಸಾವಿತ್ರಿ**- ಪ್ರತಿಕೂಲ ವಿಧಿಯೊಡನೆ ಸೆಣಸಬಾರದೆ ತಂದೆ?

**ಯಮಧರ್ಮ**-ವಿಧಿನಿಯಮ ಮೀರಲೆಡೆಯಿಹುದಿಲ್ಲ ಕಂದಮ್ಮ!
ಪ್ರಕೃತಿಗದೆ ಕೊನೆಯ ಜಯ, ಅಂತಿಮದ ಜಯ ವಿಧಿಗೆ

**ಸಾವಿತ್ರಿ**- ಅಂತಿಮದ ಜಯಕಾನು ಹಾರೈಸೆ ಯಮದೇವ!
ಬಾಳಮುಗುಳೊಳೆ ಉಡಿದ ವಿದಿಯ ಸಹಿಸೆನು ನಾನು.
ಸದ್ಧರ್ಮದೊಳ್ಇಂದು ವಿಧಿಯನೊಲಿಸುವೆನಿಂದು

**ಯಮಧರ್ಮ**-ಧೀರೆಯಿಹೆ! ಮತಿವಂತಳಿಹೆ ನೀನು ಸಾವಿತ್ರಿ
ಪಾತಿವ್ರತ್ಯವ ಬಿಡದೆ ಪಾಲಿಸಿಹೆಯಲ್ಲದೊಡೆ
ಎನ್ನ ಕಿಂಕರ ವರ್ಗ ನಿನ್ನ ಬಳಿ ಸಾರಲ್ಕೆ
ಆರದೆಯೆ ಮರಳಿಹರು. ಅಂತಾನು ಬಂದಿಹೆನು

ಇದುವರೆಗು ಇಂತು ಅನಾರ್ಗಕಂಡಿಹೆನಿಲ್ಲ.
ಪೊತ್ತಾಯ್ತು ನಾನ್ ಬಂದು ನಿನ್ನೊಳೀ ಪರಿಯಿಂತು
ಆಡುವುದು ಧರ್ಮವಿರದೀ ಪೊತ್ತು. ತೊಲಗಿನಿಲ್!
ನಿನ್ನ ಪತಿ ದೇಹವನು ಹದಿಬದೆಯೆ! ನಿನ್ನ ಮಡಿ
ಲಿಂದಾನು ಕಸಗೊಳಲಿಕಸಮರ್ಥ ನಿನ್ನ ಪತಿ
ಪ್ರಾಣವನು. ತಡಮಾಡದಿರ್, ತೊಲಗು ಸಾವಿತ್ರಿ

**ಸಾವಿತ್ರಿ-** ಪತಿಯ ಬಿಟ್ಟಗಲುವುದು ಸತಿಗೆ ಧರ್ಮವೆ ತಂದೆ?

**ಯಮಧರ್ಮ-** ಇದು ನಿನ್ನ ಪತಿಯ ಮೃತದೇಹವಿಂದೆ ಸಾವಿತ್ರಿ!
ನೆಚ್ಚದಿರು ಅದನು ನೀನ್ ಪತಿಯೆಂದು. ಪಂಚತ್ವ
ಪೊಂದುವುದು ಪಂಚಭೂತಗಳಿಂದ ಕಟ್ಟಿದೀ
ತೋರಣವು. ಜೀವಕಿದೆ ಅಮರತ್ವ. ತೊಲಗಿನಿಲ್

**ಸಾವಿತ್ರಿ-** (ಯೋಚಿಸಿ)
ಅರಿತೆನೀಗಳ್ ನಾನು ಧರ್ಮ! ಇದೊ! ತೊಲಗಿಹೆನ್
(ದೂರ ಸರಿಯುವಳು. ಯಮನು ಪಾಶವನ್ನು ಬೀಸಿ ಸತ್ಯ
ವಾನನ ಜೀವವನ್ನು ಸೆಳೆದು)

**ಯಮಧರ್ಮ-** ಸರಿ, ಪೋದಪೆನಿನ್ನು- ಕೊಂಡೊಯ್ದಪೆನು ನಿನ್ನ
ಪತಿಯ ಪ್ರಾಣವನಿಂತು-ಮರುಗದಿರುನೀ ಮಗಳೇ!
ಬಾಳು ಪತಿಯನು ಮರೆತು, ಎನಿತು ಜನ ಬಾಲೆಯರ
ಕಣ್ಣೀರ ಹೊನಲಿನಲಿ ನಾಂದಿಸದ, ಶೋಕಾಗ್ನಿ
ಯುರಿಯಿಂದ ಕರಗದಿಹ ಯೆನ್ನ ಕಲ್ಲೆದೆಯಿಂದು
ಕರಗುತಿದೆ. ಕನಿಕರಿಸುತಿದೆ ಮಗಳೆ, ನಿನಗಾಗಿ.
ಆದರಧಿಕಾರಿಯಾಗಿಹೆನಿಲ್ಲ. ನಾನ್ ಧರ್ಮ
ಮೀರಿ ನಿನ್ನಯ ಪತಿಯ ಜೀವವಂ ಕೊಡಲಾರೆ

**ಸಾವಿತ್ರಿ-** ನಿನ್ನ ಧರ್ಮವ ನೀನು ಮೀರದಿರು ಯಮದೇವ;
ಕೊಲುವ ಯಮ ನಿನಗೆನ್ನ ಕೊಲುವುದಕೆ ಕರುಣೆಯೇ?

ಜಡದೇಹವನ್ನುಳಿದು ಪತಿಜೀವದೊಡಬೆರೆತು
ಜತೆಯಾಗಿ ಬಂದಪೆನ್. ಕೊಲು ಎನ್ನ ನೀನ್ ತಂದೆ.

ಯಮಧರ್ಮ-ಬಾಳು ಮುಗಿಯದ ಮುನ್ನ ಕೊಲಲಾರೆ ನಾ ನಿನ್ನ.
ಮುಟ್ಟಲಂಜುವೆ ಮಗಳೆ! ಬರಿದೆ ಛಲ ಪಿಡಿಯದಿರ್
ಪೀಡಿಸದಿರೆನ್ನ
(ಮುಂದಾಗುವನು)

ಸಾವಿತ್ರಿ- ಪೀಡಿಸೆ ನಿನ್ನ ಯಮದೇವ!
ನಿನ್ನ ಧರ್ಮವ ನೀನು ಮಾಡುತಿರು ಯಮಧರ್ಮ!
ಆನೆನ್ನ ಧರ್ಮದಲಿ ಬಿಡದೆ ನಡೆಯುವೆ ತಂದೆ
(ಯಮಧರ್ಮನನ್ನು ಹಿಂಬಾಲಿಸುವಳು. ಮುನ್ನಡೆಯು
ತಿದ್ದ ಯಮಧರ್ಮನು ತಿರುಗಿನೋಡಿ ಆಶ್ಚರ್ಯದಿಂದ)

ಯಮಧರ್ಮ-ಸಾವಿತ್ರಿ ...! ಎನ್ನ ನೀನ್ ಅನುಸರಿಸಬಾರದಿದು.
ಬೆಂಬಿಡದೆ ಬರ್ಪೆಯೇತಕೆಯೆನ್ನನಾಗದಿದು.

ಸಾವಿತ್ರಿ- ನಿನ್ನ ನಾ ಬೆಂಬಿಡದೆ ಬಹೆನಿಲ್ಲ ಯಮದೇವ
ನಿನ್ನ ಮಾತಂ ಮೀರೆನಾದೊಡೆಯು ಆನೆನ್ನ
ಪತಿಯನನುಸರಿಸುವುದು ಸರಿಯಲ್ಲವೇ ತಂದೆ?

ಯಮಧರ್ಮ-ಮೆಚ್ಚಿಹೆನ್ ನಾನ್ ನಿನಗೆ, ವರವಬೇಡುವುದೊಂದು
ಪತಿಯ ಪ್ರಾಣವನುಳಿದು....

ಸಾವಿತ್ರಿ- ಪತಿಯ ಜೀವವನುಳಿದು
ಮಿಕ್ಕ ವರವೇಕೆನಗೆ? ಆದೊಡೆಯು ಯಾಚಿಪೆನು.
ದಿಟ್ಟಿ ತೋರದಯೆನ್ನ ಅತ್ತೆ ಮಾವಂದಿರಿಗೆ
ದಿಟ್ಟಿಕೊಡು. ಕಳೆದಿರ್ಪ ರಾಜ್ಯ ಕೈ ಸೇರ್ವಂತೆ
ಹರಸೆನ್ನ ಯಮದೇವ

ಯಮಧರ್ಮ-(ಕೈಯೆತ್ತಿ)
ತಥಾಸ್ತು! ಪೋಗುವುದಿನ್ನು.

ಬರಬಾರದೆನ್ನೊಡನೆ ಮರಳು ನೀನ್ ಸಾವಿತ್ರಿ,

(ಯಮಧರ್ಮನು ಮುಂದಾಗುವನು. ಸಾವಿತ್ರಿಯು ಅವನನ್ನು ಅನುಸರಿಸುವಳು)

— ತೆರೆ —

# ದೃಶ್ಯ ೫

(ಆಕಾಶಮಾರ್ಗ, ಯಮಧರ್ಮನು ಮುಂದಾಗುತ್ತಿರುವನು. ಸಾವಿತ್ರಿಯು ಅನುಸರಿಸುತ್ತಿರುವಳು. ಯಮಧರ್ಮನು ತಿರುಗಿನೋಡಿ ಅತ್ಯಾಶ್ಚರ್ಯದಿಂದ)

**ಯಮಧರ್ಮ**- ಸಾವಿತ್ರಿ!

**ಸಾವಿತ್ರಿ**- ಯಮದೇವ....,

**ಯಮಧರ್ಮ**- ಮತ್ತೆಮತ್ತೆನ್ನೊಡನೆ
ಅನುಸರಿಪೆಯೇಕಬಲೆ? ಮೀರಬಾರದು ಧರ್ಮ,
ತಿರುಗಿ ನಡೆಯಮ್ಮ

**ಸಾವಿತ್ರಿ**- ಮರಳುವೆನೆಂತು ಯಮಧರ್ಮ!
ಪತಿಯ ನೆರಳಾಗಿ ಸತಿ ಬರುವುದಿದು ಸದ್ಧರ್ಮ,
ನಿನ್ನ ಕಾರ್ಯವ ನೀನು ಮಾಡುತಿರು ಧರ್ಮವೆ!
ಎನ್ನ ಧರ್ಮವ ನಾನು ಪಾಲಿಪೆನು

**ಯಮಧರ್ಮ**- ಲೇಸಾಯ್ತು!
ಮೆಚ್ಚಿದೆನ್ ನಾನ್ ನಿನಗೆ, ಪತಿಯ ಪ್ರಾಣವನುಳಿದು
ಪೆರತೊಂದು ವರವ ಕೇಳ್. ಮರಳಿಮನ ಮಾಡದಿರ್
ಬೆಂಬಿಡಿಯದಿರ್ ಎನ್ನ....

**ಸಾವಿತ್ರಿ**- ಪುತ್ರರಿಲ್ಲದ ಎನ್ನ
ಪಿತಗೆ ಪುತ್ರೋದಯವ ಕರುಣಿಪುದು ಯಮದೇವ!

**ಯಮಧರ್ಮ**-(ಕೈಯೆತ್ತಿ)
ತಥಾಸ್ತು! ಮರಳಿಲಿ ಮಗಳೆ, ಬರಬಾರದೆನ್ನೊಡನೆ
(ಯಮಧರ್ಮನು ಮುಂದಾಗುವನು. ಸಾವಿತ್ರಿ ಆತನನ್ನು ಹಿಂಬಾಲಿಸುವಳು.

— **ತೆರೆ** —

## ದೃಶ್ಯ ೬

(ಆಕಾಶಮಾರ್ಗ. ಮುಂದೆ ಯಮಧರ್ಮನು ಹೋಗು ತ್ತಿರುವನು. ಹಿಂದಿನಿಂದ ಸಾವಿತ್ರಿಯು ಅನುಸರಿಸುತ್ತಿರು ವಳು)

**ಯಮಧರ್ಮ**-(ತಿರುಗಿನೋಡಿ)
ಅಚ್ಚರಿಯು! ಆರಿವಳ್ ಬರುತಿಹಳು! ಸಾವಿತ್ರಿ!
ಎನ್ನನೇತಕೆ ಬಿಡದೆ ನಡೆತಹೆಯು? ಭೂಲೋಕ
ಮುಗಿದಪುದು ಇಲ್ಲಿ. ಯಮಲೋಕವಹುದದು ಮುಂದೆ.
ಮಾನವರ್ ಮುಂದೊತ್ತಿ ಬರಬಾರದಿದು ನಿಯಮ.
ಮರುಮಾತನಾಡದೆಯೆ ಮರಳಿ ನಡೆಯಮ್ಮ!

**ಸಾವಿತ್ರಿ**- ಪತಿಯನುಳಿಯುತ ನಡೆಯುವುದು ಹಿತವೆ ಸತಿಗೆ ಯಮ?
ಧರ್ಮವನು ನಾನು ಮೀರುತ ನಡೆವಳಲ್ಲ. ಸತಿ
ಧರ್ಮದೊಳೆ ನಡೆಯುತಿಹೆ. ಪತಿಯ ಬೆಂಬಿಡಿಯುತಿಹೆ

**ಯಮಧರ್ಮ**-(ಯೋಚಿಸಿ ತಲೆದೂಗಿ)
ನಿನ್ನ ಧೈರ್ಯಕೆ ಮೆಚ್ಚಿ ಪೆರತೊಂದು ವರವಿತ್ತೆ,
ಕೇಳುವುದು ಕೊನೆಯದಿದ. ಮರಳಿ ನೀನೆನ್ನ ಬೆನ್
ಬಿಡವೇಳ್ಕು ಸಾವಿತ್ರಿ

**ಸಾವಿತ್ರಿ**- ಕರುಣಿಪುದು ಯಮದೇವ!
ಮುಂದೆನ್ನ ಪತಿಕುಲಕೆ ಮಂಗಲವ ಬಯಸೊಡೆಯು!
ಪುತ್ರರನು ಪಡೆವಂತೆ ಹರಸೆನ್ನ ನೀನ್ ತಂದೆ.

**ಯಮಧರ್ಮ**-ತಥಾಸ್ತು! ಪೋಗುವುದಿನ್ನು

**ಸಾವಿತ್ರಿ**- ಅನುಗ್ರಹಿಸು ಯಮದೇವ!

**ಯಮಧರ್ಮ**-ಮೂರು ವರಗಳನಿತ್ತೆ, ನಿನಗೊಲಿದು ನಾನಮ್ಮ
ತೆರಳುವುದಾ.

ಸಾವಿತ್ರಿ- ತೆರಳುವೆನು. ಪತಿಯು ಕರುಣಿಸು ದೇವ!

ಯಮಧರ್ಮ-ಪೇಳ್ದಿನಲ್ಲವೆ ಮೊದಲೆ ಪತಿಯನುಳಿದೆಂದಾನು?

ಸಾವಿತ್ರಿ- ನಿಜಧರ್ಮ! ಪತಿಯ ಕರುಣಿಸದೆಂತು ಸುತರ ನೀನ್
ಕರುಣಿಸುವೆ? ಪುತ್ರರನು ಪಡೆಯಲ್ಕೆ ಹರಸಿರ್ಪೆ!

ಯಮಧರ್ಮ-(ಯೋಚಿಸಿ ಅರಿತು. ಆಶ್ಚರ್ಯದಿಂದ)
ಅಚ್ಚರಿಯು! ನೀನೆನ್ನನೊಲಿಸಿಹೆಯು ಸಾವಿತ್ರಿ!
ನಾನಿಂದುವರೆಗೆ ಕಂಡಿಹೆನಿಲ್ಲ ನಿನ್ನಂದ
ದಾ ಕುವರಿಯರ. ಸಾವನೊಲಿಸಿದುದು ನಿನ್ನಿಂದ
ಮೊದಲಾಯ್ತು. ಕರುಣಿಸಿಹೆ ನಿನ್ನ ಪತಿ ಪ್ರಾಣಮಂ.
ಮಾಂಗಲ್ಯಮಂ ಪಡೆದು ಬಾಳ್‌ಮಗಳೆಯಿದುವೆನ್ನ
ನಿಡು ಹರಕೆ! ಅನಿಲ್ಲಿ ಯೆನ್ನಧರ್ಮವ ಮೀರಿ
ನಡೆದೊಡಂ; ಮಗಳೆ ನೀನ್, ಬಾಳುವುದು ಸೊಗದಿಂದ.
ಪೊಗಳ್ದಪೆನ್ ನಾನಿನ್ನನೊಲಿದು. ನೀನ್ ಸತಿಧರ್ಮ
ದಾಮಹಿಮೆ ತೋರಿಸಿಹೆ ಜಗಕಿಂದು. ಭಾರತದ
ಸತಿಯರಲಿ ನಿನ್ನಮರಜಸದೆಸಕ ಪೆರ್ಚಿರಲಿ.
ಕೀರ್ತಿಶಾಲಿನಿಯಾಗು! ಪಾಪನಾಶಕವಾಗ
ಲಮ್ಮ ನಿನ್ನಯ ನಾಮ. ಪತಿ ಸತ್ಯವಾನನನು
ಬೆಂಬಿಡದೆ ಸಾವನೊಲಿಸಿಹ ನಿನಗೆ ಪೆಸರಿಡುವೆ
ಸಾವೊಲಿದ ಸಾವಿತ್ರಿ! ಮರಳಮ್ಮ ತೋಷದಲಿ

ಸಾವಿತ್ರಿ- (ಬಾಗಿ ವಂದಿಸಿ)
ಮರಳುವೆನು ಪತಿಯೊಡನೆ ಹರಸೆಮ್ಮ ತಂದೆ

ಯಮಧರ್ಮ-(ಕೈಯೆತ್ತಿ ಹರಸಿ)
ಸಾವೊಲಿದ ಸಾವಿತ್ರಿ! ಸೊಗದಿ ಬಾಳ್ವುದು ಮುಂದೆ.

— ತೆರೆ —

# ದೃಶ್ಯ 2

(ಮುಂಬೆಳಗು-ಕಾನನದ ಹಾಸುಗಲ್ಲಿನ ಮೇಲೆ ಸಾವಿತ್ರಿಯ
ತೊಡೆಯ ಮೇಲೆ ಸತ್ಯವಾನನು ಮಲಗಿ ನಿದ್ರಿಸುತ್ತಿರು
ವನು)

ಸಾವಿತ್ರಿ- (ಪತಿಯ ಮೈಮೇಲೆ ಕೈಯಾಡಿಸುತ್ತಾ)
ಏಳು! ಏಳೆನ್ನ ಮನದಿನಿಯ! ಮುಂಬೆಳಗಿನಲಿ
ಮಲಗಬಾರದುಯಿಂತು. ಕರಗಿಹುದು ಕಾರಿರುಳು

ಸತ್ಯವಾನ. (ಸಾವಿತ್ರಿಯ ತೊಡೆಯಿಂದ ನಿದ್ದೆಯಿಂದೆದ್ದವನಂತೆ ಜಗ್ಗನೆ
ಎದ್ದು ಕುಳಿತು ಭ್ರಾಂತಿಯಿಂದ)
ಸಾವಿತ್ರಿ! ಸಾವಿತ್ರಿ! ಆವ ನಿದ್ದೆಯೊಳಿದ್ದೆ
ಸಾವಿತ್ರಿ! ಕೆಟ್ಟ ಕನಸಿದು ಪಗಲೆ! ನಾನಾವ
ಲೋಕದೊಳು ತಿರುಗಿಹೆನೊ ನಾನರಿಯೆ! ಎಲ್ಲಿಹವು?

ಸಾವಿತ್ರಿ- (ಸಂತಸದಿಂದ)
ಕಾನನಕೆ ಕಟ್ಟಿಗೆಗೆ ಬಂದುದನು ಮರೆತೆಯಾ!
ನಿಡುನಿದ್ದೆಯೊಳಗಿದ್ದೆಯಿರುಳಿಡೀ ನೀನ್ ಕಾಂತ!

ಸತ್ಯವಾನ- ಎಚ್ಚರದೊಳಿದ್ದು ನೀನೆನ್ನ ಕಾದಿಹೆ ದೇವಿ!

ಸಾವಿತ್ರಿ- ಮುಂಬೆಳಗ ಪೊತ್ತೇರುತಿದೆ ರಮಣ! ಆಶ್ರಮದಿ
ಕಾಯ್ದಪರು ನಿನ್ನ ತಾಯ್ತಂದೆಯೆಮ್ಮಯ ಬರವ

ಸತ್ಯವಾನ- (ಎದ್ದು ಮುಂದಾಗಿ)
ಪೊರಡುವಂ
(ಇದಿರು ನೋಡಿ)
ಅದೊ! ಇದಿರ್ ಬಂದಪರ್ ದೇವಮುನಿ
ನಾರದರ್
(ನಾರದರು ಹರಿನಾಮ ಸ್ಮರಣೆಯೊಂದಿಗೆ ಪ್ರವೇಶಿಸು

ವರು. ಸತ್ಯವಾನನು ಸಾವಿತ್ರಿಯೊಂದಿಗೆ ತಲೆಬಾಗಿ)
ವಂದಿಪೆನು, ಮುನಿವರ್ಯ ಸತಿಯೊಡನೆ

**ಸಾವಿತ್ರಿ-** ಪತಿಯೊಡನೆ ವಂದಿಪೆನ್ ಹರಕೆಗೈ ತಂದೆ.
ನಿನ್ನ ಹರಕೆಯ ಬಲದಿ ಮರಳಿ ಪಡೆದಿಹೆನೆನ್ನ
ಪತಿ ಪ್ರಾಣಮಂ ಜವನ ಕೈಯಿಂದ

**ನಾರದ-** ಸಾವಿತ್ರಿ!
ಯಮನನೊಲಿಸಿಹ ನಿನ್ನ ನಾನೆಂತು ಪೊಗಳ್ದಪೆನ್!
ಸತ್ಯವಾನ್! ಸಾವಿತ್ರಿ ನಿನ್ನನುಳಿಸುತ ಜಗದಿ
ಪೊಸಪೆಸರ ಪಡೆದಿಹಳ್ ಸಾವೊಲಿದ ಸಾವಿತ್ರಿ!
ನಿನ್ನ ಬಾಳ್ಬೆಳಕಿವಳ ಕೂಡಿ ಮನೆ ಬೆಳಗುವುದು

**ಸತ್ಯವಾನ-** (ಆಶ್ಚರ್ಯದಿಂದ)
ಕನಸಿನಂತಿದೆ ಮುನಿಪ! ಅರಿಯೆನಿದ ನಾನೊಂದ

**ನಾರದ-** ಅರಿವೆ ನೀನಿದ ಮುಂದೆ, ಬಿಡುವಿರದು ನಡೆಕಂದ
ನಿನ್ನ ತಾಯ್ತಂದೆ ಕಣ್ಪಡೆದು ಅರಸುತ ಬಹರು

**ಸತ್ಯವಾನ-** (ಅತ್ಯಾನಂದದಿಂದ)
ದಿಟ್ಟಿವಡೆದರೆಯೆನ್ನ ಮಾತಾ ಪಿತೃಗಳ್! ಭಾಗ್ಯ
ವಿದಕಾರು ಕಾರಣರು?

**ನಾರದ-** ಸಾವಿತ್ರಿಯನೆ ಕೇಳು!
ಕಳೆದಿರ್ಪ ರಾಜ್ಯವದು ನಿನ್ನ ಕೈಸೇರ್ದಪುದು.
ನಡೆ ಮಗಳೆ; ಸಾವಿತ್ರಿ!

**ಸಾವಿತ್ರಿ-** ಪಿತನಿಗೆನ್ನೊಸಗೆಯಂ
ಒರೆಯಾ ಬೇಡವೆ ತಂದೆ!

**ನಾರದ-** ಆನದಕೆ ಪೊರಟಿಹೆನ್,
ಪುತ್ರ ಚಿಂತನೆಯೊಳಿಹ ನಿನ್ನ ಪಿತಗುದಿಸುವನ್
ಸುಕುಮಾರ. ಯೋಚಿಸಲ್ಬೇಡ ನೀನೆರಡು ಕುಲ

ಗಳ ಕೀರ್ತಿ ಬೆಳಗಿಸಿಹೆ ಮಗಳೆ, ನೀನ್ ಸಾವಿತ್ರಿ!
ಪಾತಿವ್ರತ್ಯದ ಮಹಿಮೆಯನು ತೋರಿ ಜಗಕೀಗ
ಭಾರತದ ಸದ್ಧರ್ಮದೀಪವೆತ್ತುತ ಪಿಡಿದೆ.
ಪೋದಪೆನ್ ನಾಮುಂದೆ ಹರಸಿದಪೆ ನಾನಿಂದೆ.
ಪತಿಯೊಡನೆ ಬಾಳ್ವುದೌ ಸಾವೊಲಿದ ಸಾವಿತ್ರಿ!
ನಿನ್ನ ಪೆಸರಿಂದಲೇ ತಾಯ್ನಾಡಿಗಿದೆ ಕೀರ್ತಿ
(ಕೈಯೆತ್ತಿ ಹರಸಿ)
ಜಗಕೊಲಿಯಲಾವಗಂ ಸತಿಗೊಲಿದ ವರಮಿಳ್ತು
ಭದ್ರ ಶುಭ ಮಂಗಲಂ ಸೌಭಾಗ್ಯ ಯಶಮಸ್ತು
(ಸಾವಿತ್ರಿ ಸತ್ಯವಾನರು ಹರಕೆಗೆ ಮುಂದೆ ಬಾಗುವರು)

— ತೆರೆ —

## ಮುಂಡೂರು ಅವರ ಇತರ ಪ್ರಕಟಿತ ಕೃತಿಗಳು

ಕಾಡಮಲ್ಲಿಗೆ

ಹೊಸತು ಕಟ್ಟು

ಶಿವ ಕುಮಾರಿ

ಸಖಿ

ಹುತ್ತದಲ್ಲಿ ಹೂ

ಹೃದಯ ರೂಪಕ

ಹೊಸಕೆರೆಯ ಹೊನ್ನಮ್ಮ

ಜೀವದಯಾಷ್ಟಮಿ

ಅಬ್ಬಿಯ ಮಡಿಲು

ಕಣ್ ಕನಸು ತೆರೆದಾಗ

ನವ ದಿಗಂತ

ನೀವು ನೇರಾಗಿ ಕೃತಿಗಳನ್ನು
ಪಡೆಯಬಹುದು.
ನಿಮ್ಮ ಆತ್ಮೀಯರ ಉಡುಗೊರೆ
ಯಾಗಿ ಪಡೆಯಬಹುದು.
ಅಂತೆಯೇ ನಿಮ್ಮ ಹೆಸರಿನಲ್ಲಿ ಬೇಕಾ
ದವರಿಗೆ ಬೇಕಾದೆಡೆಗೆ ಉಡುಗೊರೆ
ಯಾಗಿ ನೀಡಬಹುದು.

●

ಹತ್ತು ಮಂದಿಗೆ ಉಡುಗೊರೆ
ನೀಡಿದ ಉದಾರಿಗಳಿಗೆ ಹನ್ನೊಂದನೆ
ಯದಾಗಿ ಪ್ರತಿಮಾ ತನ್ನ ಪಾಲಿನ
ಉಡುಗೊರೆಯನ್ನು ನೀಡಿ
ಸನ್ಮಾನಿಸುವುದಲ್ಲದೆ
ಅವರ ಭಾವಚಿತ್ರವನ್ನು ಮುಂದಿನ
ಪ್ರಕಟಣೆಗಳಲ್ಲಿ
ಪ್ರಕಟಿಸುತ್ತದೆ.

●

ವರುಷದ ಯಾವ ಭಾಗದಲ್ಲೂ
ಪ್ರತಿಮಾ ಯೋಜನೆಗೆ ಸೇರಿ
ಹಿಂದಿನ ಹಾಗೂ ಮುಂದಿನ
ಕೃತಿಗಳನ್ನು
ಪಡೆದುಕೊಳ್ಳಬಹುದು.

●

ಪ್ರತಿ ತಿಂಗಳ ಕೊನೆಯ ವಾರದಲ್ಲಿ
ಅಂಚೆ ಮೂಲಕ
(Certificate of Posting)
ನಾಟಕಗಳು
ನಿಮ್ಮ ಮನೆಬಾಗಿಲಿಗೆ
ಬರುತ್ತವೆ.

---

ಹೆಸರು ____________________

ವಿಳಾಸ ____________________

____________________

ಪ್ರಿಯರೇ,

ಪ್ರತಿಮಾ ಯೋಜನೆಯಂತೆ ಪ್ರಕಟವಾಗಲಿರುವ ೧೨ ನಾಟಕಗಳನ್ನು ನನ್ನ/ನನ್ನ ಉಡುಗೊರೆಯಾಗಿ/ಮೇಲಿನ ವಿಳಾಸಕ್ಕೆ ಕಳುಹಿಸಿರಿ. ಈ ಬಗ್ಗೆ ರೂ............/-ನ್ನು ____________________ ಕಳುಹಿಸಿರುತ್ತೇನೆ:

ತಮ್ಮ ವಿಶ್ವಾಸಿ,

ಹೆಸರು..............................

ವಿಳಾಸ..............................

---

ದಯಮಾಡಿ ಎಡಬದಿಯಲ್ಲಿರುವ ಮುದ್ರಿತ
ಕಾರ್ಡನ್ನು ತುಂಬಿಸಿ ಅಂಚೆ ಚೀಟು ಹಚ್ಚಿ
ಟಪ್ಪಾಲು ಮಾಡಿರಿ.

ಹಣವನ್ನು ಪ್ರತ್ಯೇಕವಾಗಿ

**ಪ್ರಕಾಶಕ**

**ಪ್ರತಿಮಾ ಪ್ರಕಾಶನ ಪಂಜ**

ಅಂಚೆ: **ಪಂಜ, ದ. ಕ.**

ಈ ವಿಳಾಸಕ್ಕೆ ಕಳುಹಿಸಬೇಕು.

ಹಣ ಪಾವತಿಯಾದ ಬಗ್ಗೆ ರಶೀದಿ ಹಾಗೂ
ಕೃತಿಗಳನ್ನು ಕಳುಹಿಸಲಾಗುವುದು.

## ಪ್ರತಿಮಾ ಯೋಜನೆಯು—

ಪ್ರಥಮ ನಾಟಕ : **ಸಾವೊಲಿದ ಸಾವಿತ್ರಿ** ರೂ. ೧-

ಮುಂದಿನ ನಾಟಕ : **ಮರಳಿ ಮನೆಗೆ** (ಸಾಮಾಜಿಕ ಪ್ರಹಸನ)

ಶಾಲಾ, ಕಾಲೇಜು ವಿದ್ಯಾರ್ಥಿಗಳ
ಅಭ್ಯಾಸಿ ಕಲಾವಿಲಾಸಿಗಳ –
ಓದಿಗೆ, ಪ್ರದರ್ಶನಗಳಿಗೆ
ಯೋಗ್ಯವಾದ
**ಪ್ರತಿಮಾ ನಾಟಕಗಳು**

●

ಪ್ರಕಾಶಕರು :

**ಪ್ರತಿಮಾ ಪ್ರಕಾಶನ ಪಂ**
**ಪಂಜ, ದ. ಕ.**